

ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೦೯-೧೦ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮಹಿಳಾ ಚಳವಳಿ


ನಿಬಂಧಕಾರರು

ಕೆ.ಎಸ್.ಯೋಗೇಶ್

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಪ್ರಧಾನ್ ಗುರುದತ್ತ

ನಿವೃತ್ತ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು





ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೦೯-೧೦



# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೦೯-೧೦ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮಹಿಳಾ ಚಳವಳಿ


ನಿಬಂಧಕಾರರು

**ಕೆ.ಎಸ್.ಯೋಗೇಶ್**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಪ್ರಧಾನ್ ಗುರುದತ್ತ**

ನಿವೃತ್ತ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು



**ಕುವೆಂಪು ವಿದ್ಯಾವರ್ಧಕ ಟ್ರಸ್ಟ್**
ಜಯಲಕ್ಷ್ಮೀಪುರಂ, ಮೈಸೂರು

**೨೦೦೯-೧೦**

# ದೃಢೀಕರಣ ಪತ್ರ

೨೦೦೯-೧೦ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS-00427**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ ಕೆ.ಎಸ್.ಯೋಗೇಶ್ ಅವರು ನನ್ನ ಮಾರ್ಗದರ್ಶನದಲ್ಲಿ **"ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮಹಿಳಾ ಚಳವಳಿ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಪ್ರಧಾನ್ ಗುರುದತ್ತ

**(ಪ್ರಧಾನ್ ಗುರುದತ್ತ)**
ಮಾರ್ಗದರ್ಶಕರು

**ಮೈಸೂರು**
೧೪-೦೮-೨೦೧೦

## ಅಭ್ಯರ್ಥಿಯ ಘೋಷಣಾ ಪತ್ರ

**"ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮಹಿಳಾ ಚಳವಳಿ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ **KVTMKS-00427**ರ ವಿದ್ಯಾರ್ಥಿಯಾದ ನಾನು ೨೦೦೯-೧೦ನೇ ಸಾಲಿನ ಪರೀಕ್ಷೆಗಾಗಿ ಡಾ. ಪ್ರಧಾನ್ ಗುರುದತ್ತ (ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಅಧ್ಯಕ್ಷರು, ಬೆಂಗಳೂರು-೫೬೦೦೫೬) ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಸಂಪ್ರಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಕೆ. ಎಸ್. ಯೋಗೇಶ್

**ಮೈಸೂರು**
ದಿನಾಂಕ: ೧೪-೦೮-೨೦೧೦

**(ಕೆ.ಎಸ್.ಯೋಗೇಶ್)**
೨೦೦೯-೧೦ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಪುಟಗಳು

# “ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮಹಿಳಾ ಚಳವಳಿ”

***

# ಪ್ರವೇಶಿಕೆ

**ಮಾನವ** ಮೂಲತಃ ಹೋರಾಟಗಾರನಾದ್ದರಿಂದ 'ಚಳವಳಿ' ಎಂಬುದು ಮಾನವನ ಇತಿಹಾಸದಷ್ಟು ಹಳೆಯದು. ಮಾನವನ ಬದುಕಿನಲ್ಲಿ ಬದಲಾವಣೆಗಳನ್ನು ತರಲು ಚಳವಳಿಗಳು ಹುಟ್ಟಿಕೊಳ್ಳುತ್ತವೆ. 'ಚಳವಳಿ' ಎಂಬ ಪದದಲ್ಲಿ ಚಳ > ಚಲ ಎಂಬ ಮೂಲ ರೂಪವಿದೆ. 'ಚಲ' ಎಂಬ ಪದ ಚಲಿಸು ಎಂಬರ್ಥದಲ್ಲಿ ಬಳಕೆಯಾಗಿದೆ. ಚಲಿಸುತ್ತಿರುವ ಸ್ಥಿತಿಗೆ ಈ ಪದ ಬಳಕೆಯಾಗುವುದಿಲ್ಲ. ನಿಂತಿರುವ ಸ್ಥಿತಿಗೆ ಈ ಪದ ಬಳಕೆಯಾಗುತ್ತದೆ. ಒಂದು ಸಾಮಾಜಿಕ ವ್ಯವಸ್ಥೆಯ ರೀತಿ–ನೀತಿಗಳು ನಿಂತು ಜಡಗೊಂಡಾಗ; ಜಡ್ಡುಗಟ್ಟಿದಾಗ ಅದಕ್ಕೆ ನವಚೈತನ್ಯ ತುಂಬಲು, ಹೊಸ ಚಾಲನೆ ನೀಡಲು ಹಳೆಯದನ್ನು ಹೊರದೂಡಲು ಚಳವಳಿಗಳು ರೂಪುಗೊಳ್ಳುತ್ತವೆ. ಆದ್ದರಿಂದ ಚಳವಳಿಯ ಉದ್ದೇಶವೇ ಬದಲಾವಣೆಯಾಗಿರುತ್ತದೆ. ಈ ಬದಲಾವಣೆ ಒಂದು ಸಮೂಹದ ಆಸಕ್ತಿಯನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಹೊಸ ಆಲೋಚನೆ ಮತ್ತು ಹೊಸ ತತ್ವಗಳನ್ನು ಮೂಡಿಸಿ, ಇರುವ ಸ್ಥಿತಿಯ ಅರಿವಿನೊಂದಿಗೆ ಇರಬೇಕಾದ ಸ್ಥಿತಿಗೆ ಕೊಂಡೊಯ್ಯುವ ಚಾಲಕ ಶಕ್ತಿಯಾಗಿ ಚಳವಳಿಗಳು ಹುಟ್ಟಿಕೊಳ್ಳುತ್ತವೆ. ಮುಂದೆ ಅವುಗಳು ಸಾಮೂಹಿಕ ಆಂದೋಲನಗಳಾಗುತ್ತವೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಮನುಷ್ಯನಿಗೆ ಅನ್ಯರಿಂದ ಶೋಷಣೆ ಹಾಗೂ ಕೀಳುಸ್ಥಾನಮಾನಗಳು ಉಂಟಾದಾಗ ದುಃಸ್ಥಿತಿಗೆ ಒಳಗಾದ ಜನರೆಲ್ಲ ಸಂಘಟಿತರಾಗಿ ತಮ್ಮ ಹೀನಸ್ಥಿತಿಗೆ ಕಾರಣವಾದ ಸಂಗತಿಗಳ ವಿರುದ್ಧ ಪ್ರತಿಭಟಿಸಲು ಮತ್ತು ತಮ್ಮ ಸ್ಥಾನಮಾನಗಳನ್ನು ಉತ್ತಮಪಡಿಸಿಕೊಳ್ಳಲು ಒಗ್ಗೂಡುವುದೇ ಚಳವಳಿಗಳ ಉಗಮಕ್ಕೆ ಕಾರಣಗಳಾಗುತ್ತವೆ. ಹೀಗೆ ಹುಟ್ಟುವ ಚಳವಳಿಗಳು, ಸಾಮಾಜಿಕ ವ್ಯವಸ್ಥೆ ತಮ್ಮ ಸಮೂಹದ ಹಿತವನ್ನು ಕಡೆಗಣಿಸಿದರೆ ಪ್ರತಿರೋಧಿಸುತ್ತವೆ; ಸಮೂಹದ ಹಿತವನ್ನು ಕಾಪಾಡಿದರೆ ಬೆಂಬಲಿಸುತ್ತವೆ. ಹೀಗಾಗಿ ಆರಂಭದಲ್ಲಿ ಬಹುಶಃ ನಿರ್ದಿಷ್ಟ ಗೊತ್ತುಗುರಿಗಳಿಲ್ಲದೆ ಹುಟ್ಟುವ ಚಳವಳಿಗಳು ಅನಂತರದಲ್ಲಿ ಸ್ಪಷ್ಟತೆ ಕಂಡುಕೊಂಡು ನಿರ್ದಿಷ್ಟ ಉದ್ದೇಶ ಮತ್ತು ಗುರಿ ಸಾಧನೆಗಾಗಿ ಶ್ರಮಿಸುತ್ತವೆ.

ಲಿಂಗಭೇದ ನೀತಿಯಿಂದ ಏರ್ಪಟ್ಟಿರುವ ಸ್ತ್ರೀ–ಪುರುಷರ ನಡುವಿನ ಅಸಮಾನತೆ ಮಾನವ – ಮಾನವರ ನಡುವಿನ ಸಹಜವಾದ ಸುಮಧುರ ಸಂಬಂಧಗಳನ್ನೆ ಹಾಳುಮಾಡಿವೆ. ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ನೆಲೆಯಲ್ಲಿನ ಇಂಥ ಅಸಮಾನತೆಯನ್ನು ಹೋಗಲಾಡಿಸುವುದು ಇಂದಿನ ಅಗತ್ಯವಾಗಿದೆ.

ಅದೇ ಹೊತ್ತಿನಲ್ಲಿ ಸ್ತ್ರೀ-ಪುರುಷರಲ್ಲಿ ಸ್ತ್ರೀ ಸಮಾನತೆಯ ಚಿಂತನೆ ಮತ್ತು ಸ್ತ್ರೀಶಕ್ತಿಯ ಅರಿವನ್ನುಂಟು ಮಾಡುವ ಕಾರ್ಯವೂ ಆಗಬೇಕಾಗಿದೆ. ಮಾನವ ಹಕ್ಕುಗಳ ಹೋರಾಟದ ಹಿನ್ನೆಲೆಯಲ್ಲಿ ಮಹಿಳೆಯರನ್ನು, ಮನುಷ್ಯ ಇತಿಹಾಸ ಕಂಡಿರುವ ಬಗೆಯನ್ನು ಮತ್ತು ನಮ್ಮ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಸ್ತರದಲ್ಲಿ ಮಹಿಳೆಯರಿಗಾಗಿರುವ ಅನ್ಯಾಯವನ್ನು ಸಮಕಾಲೀನ ಆಲೋಚನೆಯೊಂದಿಗೆ ಚರ್ಚಿಸುವುದು ಇಂದಿನ ಅಗತ್ಯವಾದ ಅಂಶಗಳಲ್ಲಿ ಒಂದಾಗಿದೆ.

ಪ್ರತಿಯೊಂದು ಸಮಾಜವು ಒಂದು ಸಾಮಾಜಿಕ ವ್ಯವಸ್ಥೆಯನ್ನು ಹೊಂದಿರುತ್ತದೆ. ಆ ವ್ಯವಸ್ಥೆ ತನ್ನ ಸಮಾಜದ ಉಳಿವಿಗೆ ಮತ್ತು ಏಳಿಗೆಗಾಗಿ ತನ್ನ ಸದಸ್ಯರೊಡನೆ ಕೆಲವು ಜವಾಬ್ದಾರಿಗಳನ್ನು ಹಂಚಿಕೊಂಡಿರುತ್ತದೆ. ಈ ಹಂಚಿಕೆ ವ್ಯಕ್ತಿಗಳ ಲಿಂಗ, ವಯಸ್ಸು ಮತ್ತು ಸಾಮರ್ಥ್ಯಗಳನ್ನು ಆಧರಿಸಿರುತ್ತದೆ. ಈ ರೀತಿಯ ಹಂಚಿಕೆ ಕಾಲದಿಂದ ಕಾಲಕ್ಕೆ ಯುಗಧರ್ಮಕ್ಕೆ ಅನುಸಾರವಾಗಿ ಬದಲಾಗುತ್ತಿರುತ್ತದೆ. ಮಹಿಳೆ, ಪುರುಷ, ಯುವಕ, ವೃದ್ಧ, ಯುವತಿ, ವೃದ್ಧೆ, ಮಕ್ಕಳು ಒಂದೇ ಕುಟುಂಬದಲ್ಲಿದ್ದು ಆ ಕುಟುಂಬದ ವಿವಿಧ ಆಶೋತ್ತರಗಳನ್ನು, ಅವಶ್ಯಕತೆಗಳನ್ನು ತಮ್ಮದೇ ಆದ ರೀತಿಯಲ್ಲಿ ಪೂರೈಸುತ್ತಿರುತ್ತಾರೆ. ಇಂಥ ಸಂದರ್ಭದಲ್ಲಿ ಪರಸ್ಪರರು ಅವಲಂಬಿತರಾಗಿರುತ್ತಾರೆ.

ಒಂದು ಸಾಂಪ್ರದಾಯಿಕ ವೃತ್ತಿ ಹಂಚಿಕೆ ಹೆಣ್ಣಿಗೆ ಅನಾದಿಕಾಲದಿಂದಲೂ ನಡೆದುಬಂದಿದೆ. ದೈಹಿಕಶಕ್ತಿ ಸಾಮರ್ಥ್ಯಕ್ಕೆ ಹೋಲಿಸಿದರೆ ಮಹಿಳೆ ಪುರುಷನಿಗಿಂತ ದುರ್ಬಲಳು ಮತ್ತು ಶಕ್ತಿಹೀನೆ. ಆದರೆ ಸಾಮಾಜಿಕ ಪಾತ್ರ ನಿರ್ವಹಣೆಯಲ್ಲಿ, ಸಂಸಾರವನ್ನು ನಿಭಾಯಿಸುವಲ್ಲಿ ಆಕೆ ತೋರುವ ಜಾಣ್ಮೆ, ಸಹನೆ, ಸಮಯ ಪ್ರಜ್ಞೆಗಳು ಯಾವ ಪುರುಷನಿಗೂ ಕಡಿಮೆಯಿಲ್ಲ. ಆಕೆಯ ಪ್ರತಿಭೆಯೂ ಪ್ರಖರವಾಗಿಯೇ ಇರುತ್ತದೆ. ಮಹಿಳೆ ಪುರುಷನಿಗೆ ಸರಿಸಮಳಾಗಿ ಹೊಲ, ಗದ್ದೆ, ಮನೆಯಲ್ಲಿ ದುಡಿಯುವುದು ಪ್ರಾಚೀನವಾದುದ್ದು. ಮಕ್ಕಳ ಮತ್ತು ಹಿರಿಯರ ಜವಾಬ್ದಾರಿಯನ್ನು ಆಕೆ ಪ್ರಾರಂಭದಿಂದಲೂ ಪುರುಷನಿಗಿಂತ ಹೆಚ್ಚು ಕಾಳಜಿವಹಿಸಿ ನಿರ್ವಹಿಸುತ್ತಾ ಬಂದಿದ್ದಾಳೆ. ಈಗಲೂ ಮಹಿಳೆ ಹೊರಗಿನ ಕೆಲಸವನ್ನು ಕಡಿಮೆ ನಿರ್ವಹಿಸಿದರೂ ಮನೆಯ ಕೆಲಸಗಳನ್ನು ಪುರುಷನಿಗಿಂತ ಅಧಿಕವಾಗಿಯೇ ನಿರ್ವಹಿಸುತ್ತಿದ್ದಾಳೆ. ಆಧುನಿಕ ಸಮಾಜದಲ್ಲಿ ಮಹಿಳೆ ಪುರುಷನಿಗೆ ಸರಿಸಮನಾಗಿ ಕಚೇರಿ ಮತ್ತು ಕಾರ್ಖಾನೆಗಳಲ್ಲಿಯೂ ದುಡಿದು ಬಂದು ಮನೆಯಲ್ಲಿಯೂ ತಮ್ಮ ಎಂದಿನ ಪಾತ್ರ ನಿರ್ವಹಣೆಯನ್ನೂ ಚಾಚೂ ತಪ್ಪದೆ ನಿರ್ವಹಿಸುತ್ತಾ ಇರುವುದರಿಂದ ಪುರುಷನಿಗಿಂತ ಹೆಚ್ಚಿನ ಶ್ರಮಭಾರ ಹೆಣ್ಣಿಗಾಗುತ್ತಿದೆ. ಹೀಗಿದ್ದರೂ ಮಹಿಳೆಯ ಸ್ವತಂತ್ರ ಅಸ್ತಿತ್ವವನ್ನು

ನಿರಾಕರಿಸಿರುವ ಅಧಾರ್ಮಿಕ ಮೌಲ್ಯವನ್ನೇ ಒಪ್ಪಿ ನಡೆಯುವ ಪುರುಷ ಸಮಾಜ ನಮ್ಮ ಕಣ್ಮುಂದಿದೆ.

ವಿವಾಹಕ್ಕೆ ಮುನ್ನ ಪ್ರಗತಿಪರಳಾಗಿರುವ ಮಹಿಳೆ ವಿವಾಹದ ನಂತರ ಜಡವ್ಯವಸ್ಥೆಯ ಬಾಹುವಿಗೆ ಸಿಕ್ಕು ನಲುಗಿದಾಗ ಮುಖವಾಡದ ಬದುಕಿನ ಪ್ರಕ್ರಿಯೆಗೆ ಒಳಗಾಗುವ ಸಾಧ್ಯತೆಗಳೇ ಅಧಿಕ. ಎಂದರೆ ಪ್ರಗತಿಪರ ಮುಖವಾಡದ ಸಂಪ್ರದಾಯಬದ್ಧ ಮಹಿಳೆಯಾಗಿ ಪರಿವರ್ತನೆ ಹೊಂದಬಹುದು. ಇಲ್ಲವಾದಲ್ಲಿ ಸಾಂಪ್ರದಾಯಿಕ ಪತಿಯೊಂದಿಗೆ ವಿರೋಧವನ್ನು ಕಟ್ಟಿಕೊಂಡು ಬದುಕಬೇಕಾಗುತ್ತದೆ. ಇಂಥ ಸ್ಥಿತಿಯಲ್ಲಿ ಆಕೆ ಯಾವುದನ್ನು ಆಯ್ಕೆ ಮಾಡುತ್ತಾಳೆ ಎನ್ನುವುದು ಮುಖ್ಯವಾಗುತ್ತದೆ. ಮಹಿಳೆ ಮೊದಲೇ ಶೋಷಿತಳು. ಪುರುಷರಾದರು ಜಾತಿಯ ಹೆಸರಿನಲ್ಲಿ, ಸಾಹಿತ್ಯದ ಹೆಸರಲ್ಲಿ ಮತ್ತು ವಿಮರ್ಶೆಯ ಹೆಸರಲ್ಲಿ ಮಹಿಳೆಯರ ಒಗ್ಗಟ್ಟನ್ನು ಒಡೆಯುತ್ತಿದ್ದಾರೆ. ಪುರುಷ-ಮಹಿಳೆಯ ಲೈಂಗಿಕ ಸಂಬಂಧದಲ್ಲಿ ಪುರುಷನ ಪಾತ್ರವನ್ನು ಮೇಲುವರ್ಗದ್ದೆಂದೂ, ಶಕ್ತಿಯುತವಾದದ್ದೆಂದೂ ಪಿತೃಸಂಸ್ಕೃತಿಯ ಮುಖವಾಣಿಯಾದ ಸಾಹಿತ್ಯ ನಂಬುತ್ತದೆ. ಅಂಥ ಸಾಹಿತ್ಯವು ಪುರುಷನ ಭೋಗದ ವಸ್ತುವಾಗಿ ಮಾತ್ರ ಮಹಿಳೆಯ ಜೀವನವನ್ನು ಮಿತಿಗೊಳಿಸುತ್ತಾ ಸ್ತ್ರೀಯಾದವಳನ್ನು ಅವಮಾನಿಸಿದೆ.[೧]

ವಿದ್ಯಾವಂತ ಮಹಿಳೆಯರು ಹೊರಗೆ ದುಡಿಯಲಾರಂಭಿಸಿದ್ದರೂ ಪುರುಷರಷ್ಟೆ ಸಮಾನ ಅವಕಾಶಗಳು ಆಕೆಗೆ ದೊರೆಯುವುದಿಲ್ಲ. ಕೆಲವೊಮ್ಮೆ ತನ್ನ ಪದೋನ್ನತಿ-ಯನ್ನು ನಿರಾಕರಿಸಿ ಇದ್ದಲೇ ಉಳಿಯಬೇಕಾದಂತಹ ಪರಿಸ್ಥಿತಿಯು ಆಕೆಗೆ ಎದುರಾಗುತ್ತದೆ. ಪುರುಷ ಪ್ರಧಾನ ಸಮಾಜ ಒಂದು ರೀತಿಯ ಪಕ್ಷಪಾತ ಧೋರಣೆಯನ್ನು ಮುಂದುವರಿಸಿಕೊಂಡೇ ಬಂದಿದೆ. ನಮ್ಮ ದೇಶದ ರಾಜಕೀಯ ವಲಯದಲ್ಲಿ ವರ್ಷದಿಂದ ವರ್ಷಕ್ಕೆ ಮಹಿಳೆಯರ ಸಂಖ್ಯೆ ಕುಸಿಯುತ್ತ ಹೋಗುತ್ತಿದೆ. ಭಾರತದ ಸಂವಿಧಾನದಲ್ಲಿ ಸರ್ವರೂ ಸಮಾನರು. ಲಿಂಗದ ಆಧಾರದಲ್ಲಾಗಲಿ, ಜಾತಿಧರ್ಮಗಳ ಆಧಾರದಲ್ಲಾಗಲಿ ಪಕ್ಷಪಾತ ಮಾಡುವುದನ್ನು ಸಂವಿಧಾನ ನಿಷೇಧಿಸಿದೆ. ಭಾರತದ ಸಂವಿಧಾನ ಪ್ರತಿಯೊಬ್ಬರ ಧಾರ್ಮಿಕ ಸ್ವಾತಂತ್ರ್ಯವನ್ನೂ ಎತ್ತಿಹಿಡಿಯುತ್ತದೆ. ಧಾರ್ಮಿಕ ಸ್ವಾತಂತ್ರ್ಯದ ಈ ಅವಕಾಶದಿಂದಾಗಿ ಮಹಿಳೆಯರಿಗೆ ಸಂವಿಧಾನವು ನೀಡಿದ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಸಮಾಜವು ಧರ್ಮದ ಹೆಸರಿನಲ್ಲಿ ಕಿತ್ತುಕೊಳ್ಳುತ್ತದೆ.

---

೧. ಮಹಿಳಾ ಚಳವಳಿ - ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೧, ೩ ಮತ್ತು ೫, ಕರ್ತೃ: ಡಾ. ಹಾಲತಿ ಸೋಮಶೇಖರ್.

ಒಟ್ಟಾರೆ ಸ್ತ್ರೀವಾದ ಮಹಿಳೆಯರ ವಿಕಾಸದ ಹಾದಿಗಳನ್ನು, ಲೈಂಗಿಕ ದಾಸ್ಯದ ಬಿಡುಗಡೆಯನ್ನು ಸಾಹಿತ್ಯದ ಮೂಲಕ ತೋರಿಸಿಕೊಟ್ಟು, ಮಹಿಳೆಯರ ಪ್ರಗತಿ ಮತ್ತು ಸುಧಾರಣೆಗೆ ಅವಕಾಶ ಮಾಡಿತು. ಮಹಿಳೆಯರ ಬರಹಗಳು ಪುರುಷರಿಗಿಂತ ಹೇಗೆ ಭಿನ್ನ ಎಂಬುದನ್ನು ಪ್ರಕಟಿಸಿತು. ನಿರ್ಲಕ್ಷ್ಯಕ್ಕೊಳಗಾಗಿದ್ದ ಸೃಜನಶೀಲ ಲೇಖಕಿಯರನ್ನು, ಕಲಾವಿದೆಯರನ್ನು ಮುಖ್ಯ ಧಾರೆಗೆ ಬರುವಂತೆ ಪ್ರೇರಣೆ ನೀಡಿತು. ಸಂಪ್ರದಾಯವನ್ನು ಪ್ರಶ್ನಿಸುವ ದೃಷ್ಟಿಧೋರಣೆಗಳನ್ನು ಹುಟ್ಟುಹಾಕಿತು. ಮಹಿಳಾ ಸಂಸ್ಕೃತಿಯೊಂದು ಮೈಚೆಲ್ಲಿಕೊಂಡು ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಚಳವಳಿಯಾಗಿ ರೂಪುಗೊಳ್ಳಲು ಅಮೇರಿಕಾದ ಸ್ತ್ರೀವಾದ ಕಾರಣವಾಯಿತು ಎಂದು ಹೇಳುವುದುಂಟು. ಮಹಿಳೆಯರೆಲ್ಲರೂ ಜಾತಿ, ಧರ್ಮಗಳ ಬಲೆಯಿಂದ ಹೊರಬಂದು ಒಟ್ಟಾದಾಗ, ಸಹೋದರೀ, ಭಾವದಿಂದ ಪರಸ್ಪರ ಕೈಹಿಡಿದು ಮುನ್ನಡೆದು ಎಲ್ಲಾ ಅಸಮಾನತೆಗಳ ವಿರುದ್ಧ ಒಕ್ಕೊರಲಿನಲ್ಲಿ ಧ್ವನಿ ಎತ್ತಿದಾಗ ಈ ಪರಿಸ್ಥಿತಿ ಬದಲಾದರೂ ಆಗಬಹುದು. ಅಂತಹ ಒಂದು ನವೋದಯಕ್ಕಾಗಿ ನಾವೆಲ್ಲರೂ ಕಾಯುವುದೇ ಇಂದು ನಮ್ಮೆದುರಿಗಿರುವ ಹಾದಿಯಾಗಿದೆ.

# ಅಧ್ಯಾಯ – ೧

# ಸಾಮಾಜಿಕ ಹಿನ್ನೆಲೆಯಲ್ಲಿ ಮಹಿಳಾ ಚಳವಳಿ

ಕಳೆದ ಶತಮಾನದ ಅರವತ್ತರ ದಶಕದಲ್ಲಿ ಜಾಗತಿಕ ಮಟ್ಟದಲ್ಲಿ ಹುಟ್ಟಿದ ಮಹಿಳಾ ಚಳವಳಿಗಳಿಗೂ ಸಹ ಇಂಥ ಚಾರಿತ್ರಿಕ ಒತ್ತಡದ ಕಾರಣದಿಂದಲೇ ಉದ್ಭವಿಸಿದವು. ವೇದಗಳ ಕಾಲದಿಂದೀಚೆಗೆ ಸುಮಾರು ಎರಡು ಸಾವಿರ ವರ್ಷಗಳಿಂದ ಮಹಿಳೆ ಪುರುಷನಿಗಿಂತ ಕೀಳು, ಪುರುಷನ ಅಧೀನ ಎಂಬ ಅಭಿಪ್ರಾಯಗಳು ಸ್ಥಾಪನೆಗೊಂಡವು. ಸಾಮಾಜಿಕ ಸ್ಥಾನಮಾನದಲ್ಲಿ ಮಹಿಳೆ ಎರಡನೆಯವಳಾದಳು; ಆಕೆಯೊಂದು ವಸ್ತು ಎಂಬಂತೆ ಪರಿಗಣಿಸಲ್ಪಟ್ಟಳು. ಮಹಿಳೆಯರನ್ನು ನಿರ್ದಯವಾಗಿ, ಅಮಾನವೀಯವಾಗಿ ದಂಡಿಸುವ, ಶಿಕ್ಷಿಸುವ, ಸಾಯಿಸುವ ಪುರುಷ ಪ್ರಧಾನ ಸಮಾಜ ರೂಪುಗೊಂಡಿತು. ಮಹಿಳೆಯರನ್ನು ವಿನಾಕಾರಣ ಹಿಂಸಿಸುವ ರೀತಿನೀತಿಗಳನ್ನು ಹೇಳುವ 'ಸ್ಮೃತಿ'ಗಳು ರಚನೆಗೊಂಡವು. ಪುರುಷ ಪ್ರಧಾನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಈ ಬಗೆಯ ಸ್ಮೃತಿಗಳು ಹೆಣ್ಣನ್ನು ಅಧೀನದಲ್ಲಿಟ್ಟುಕೊಳ್ಳುವ ವಿಧಾನಗಳನ್ನೇ ಗಟ್ಟಿಗೊಳಿಸಿದವು. ಇದರಿಂದಾಗಿ ಸಹಸ್ರಾರು ವರ್ಷಗಳಿಂದ ಮಹಿಳೆ ನಿರಂತರ ಶೋಷಣೆಗೊಳಗಾಗಿ ಅಪಾರ ನೋವಿನಲ್ಲಿ ನರಳಿದಳು. ಹೆಣ್ಣು ಶಿಶುಹತ್ಯೆ, ಬಾಲ್ಯವಿವಾಹ, ಬಹುಪತ್ನಿತ್ವ, ಸತಿ–ಸಹಗಮನ ಪದ್ಧತಿ, ದೇವದಾಸಿ ಪದ್ಧತಿ, ವರದಕ್ಷಿಣೆ, ವಿಧವಾಚರಣೆ, ವಿಧವಾವಿವಾಹ ನಿಷೇಧ, ಪರದಾ ಪದ್ಧತಿ ಮುಂತಾದ ಅನಿಷ್ಠ ಆಚರಣೆಗಳು ಸ್ತ್ರೀಯರ ಸ್ಥಿತಿಗತಿಗಳನ್ನು ಅಧೋಗತಿಗಿಳಿಸಿದವು. ಇದರಿಂದಾಗಿ ಸ್ತ್ರೀಯರ ದುಸ್ಥಿತಿ ಮತ್ತು ಪುರುಷರ ದಬ್ಬಾಳಿಕೆ ಎಲ್ಲೆ ಮೀರಿದವು. ಇಂಥ ಅಮಾನವೀಯ ಆಚರಣೆಗಳ ವಿರುದ್ಧ ಪ್ರತಿಭಟಿಸಲು ಮತ್ತು ಪುರುಷರಿಗೆ ಸರಿಸಮನಾಗಿ ಮಹಿಳೆಯರು ಬದುಕುವ ಹಕ್ಕನ್ನು ಸ್ಥಾಪಿಸಲು ಮಹಿಳಾ ಚಳವಳಿಗಳು ಉಗಮವಾದವು.[೧]

## ೧.೧. ನಾಗರಿಕತೆಯ ಪೂರ್ವದಲ್ಲಿ ಮಹಿಳೆಯ ಸ್ಥಿತಿಗತಿಗಳು

ನಾಗರಿಕತೆಯ ಪೂರ್ವಯುಗದಲ್ಲಿ ಮಹಿಳೆ ತುಂಬಾ ಬಲಿಷ್ಠಳು. ಅಪ್ರತಿಮ ತೋಳ್ಬಲವುಳ್ಳವಳು. ದೃಢಕಾಯ ಶರೀರದಲ್ಲಿ ತುಂಬು ಸ್ತನಗಳು, ಬಡನಡು, ದಷ್ಟಪುಷ್ಟ ನಿತಂಬಗಳನ್ನುಳ್ಳವಳಾಗಿದ್ದು ವೇಗದಿಂದೋಡುವುದಕ್ಕೆ ಅನುಕೂಲವಾಗುವ

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೧, ೨ ಮತ್ತು ೩, ಕರ್ತೃ: ಡಾ. ಹಾಲತಿ ಸೋಮಶೇಖರ್.

ನುರಿತ ಹಿಮ್ಮಡಿಗಳನ್ನು ಹೊಂದಿದ್ದಳು. ಕೆಂಬಣ್ಣದ ತುಟಿಗಳು, ಬೆಳ್ಳನೆಯ ಹಲ್ಲನ್ನು ಹೊಂದಿದ್ದ ಆಕೆಯ ಮೈಯಲ್ಲೆಲ್ಲಾ ರೋಮ ತುಂಬಿಕೊಂಡಿರುತ್ತಿತ್ತು. ತಲೆ ನಸು ಬಿಳಿಗೂದಲಿನ ಕೇಶರಾಶಿಯನ್ನು ಹೊಂದಿತ್ತು. ಭಾವನಾತ್ಮಕ ಸಂವೇದನೆ ಆಕೆಯಲ್ಲಿ ತೀವ್ರವಾಗಿದ್ದು ಬದುಕನ್ನೇ ಬಿರುಗಾಳಿಯಂತೆ ಮೈಮೇಲೆ ಆಹ್ವಾನಿಸಿಕೊಂಡು ಬದುಕಿನಿಂದಲೇ ಬಲವನ್ನು ಪಡೆಯುತ್ತಿದ್ದಳು. ಸ್ತ್ರೀಯಾಗಿ ಹುಟ್ಟುವುದೇ ಪೌರುಷದ ಸಂಕೇತವಾಗಿತ್ತು.

ಅಂದಿನ ಮಾನವರಲ್ಲಿ ಭೂತ ಭವಿಷ್ಯತ್‌ಗಳ ವಿಚಾರಕ್ಕಿಂತ ವರ್ತಮಾನದ ಬದುಕೇ ಮುಖ್ಯವೆನಿಸಿತ್ತು. ಕೊಂದು–ತಿಂದು ಬದುಕುವುದೇ ಮುಖ್ಯವಾಗಿತ್ತು. ಹೆಣ್ಣನ್ನು ಹಕ್ಕಿಯಂತೆ, ಜಿಂಕೆಯಂತೆ ನೋಡುತ್ತಿರಲಿಲ್ಲ. ಹೆಣ್ಣನ್ನು ಮನೆಯೊಡತಿಯಾಗಿ, ಜನಾಂಗದ ಮುಖ್ಯಸ್ಥಳನ್ನಾಗಿ ನೋಡಲಾಗುತ್ತಿತ್ತು. ಹೆಣ್ಣನ್ನು ಹೊರಕ್ಕೆ ಕೊಡುವುದು ಮತ್ತು ಒಳಗೆ ತರುವುದು ಇರಲಿಲ್ಲ. ಇಡೀ ಬಳಗದ ಎಲ್ಲಾ ಪುರುಷರ ಮೇಲೂ ಸಮಾನವಾದ ಪ್ರಥಮ ಅಧಿಕಾರ ಆ ಬಳಗದ ಮುಖ್ಯಸ್ಥೆಯಾದ ಮಹಿಳೆಗೆ ಇತ್ತು. ಪ್ರತಿ ಮಹಿಳೆಗೂ ಪ್ರಿಯರು ಮತ್ತು ಅನೇಕ ಗೆಳೆಯರು ಇರುತ್ತಿದ್ದರು. ಅವರಲ್ಲಿ ಒಲವು ತೋರಿದವನಿಗೆ ತನ್ನ ಪ್ರೇಮಭಿಕ್ಷೆ ನೀಡುವಂತಹ ಅಧಿಕಾರವಿತ್ತು. ಇಂಥ ವಿಷಯದಲ್ಲಿ ಹೆಣ್ಣೇ ಆಯ್ಕೆ ಮಾಡುತ್ತಿದ್ದಳು. ತರುಣ–ತರುಣಿಯರು ಪರಸ್ಪರ ಚುಂಬಿಸುವುದು ಸರ್ವಮಾನ್ಯವಾಗಿತ್ತು. ಪರಸ್ಪರ ಇಷ್ಟಪಟ್ಟವರು ಅಡವಿಯಲ್ಲಿ ಅದೃಶ್ಯರಾಗಿ ಬಿಡುತ್ತಿದ್ದರು. ಒಲಿದವನೊಂದಿಗೆ ಮಲಗುವುದು ಸಾಮಾನ್ಯ ದೃಶ್ಯವಾಗಿತ್ತು. ಅತಿಥಿಗಳು, ಅಭ್ಯಾಗತರು, ಇಷ್ಟಮಿತ್ರರು – ಬೀಡಿಗೆ ಬಂದರೆ ಮಡದಿಯರು ಅವನೊಂದಿಗೆ ದೇಹವನ್ನೂ ಹಂಚಿಕೊಳ್ಳುತ್ತಿದ್ದರು. ಅದನ್ನೂ ನಿರ್ಧರಿಸುವಳೂ ಹೆಣ್ಣೇ ಆಗಿದ್ದಳು. ಹೆಣ್ಣು ಗಂಡಿಗೆ ಸೊತ್ತೆನಿಸಿಕೊಳ್ಳುತ್ತಿರಲಿಲ್ಲ. ತನಗೆ ತಾನೆ ಒಡತಿಯಾಗಿರುತ್ತಿದ್ದಳು. ಆಕೆಗೆ ಅಧೀನ ಎಂಬುದಿರಲಿಲ್ಲ. ಅಲ್ಲಿ ಹೆಣ್ಣುಗಂಡು ಒಂದೇ ಸಮ. ಆಕೆ ಅಡವಿಯಲ್ಲಿ ಮೈಚಳಿ ಬಿಟ್ಟು ಅಲೆದಾಡುವ ಚಿಗರಿಯಂತೆ, ಬಾನಲ್ಲಿ ಹಾರಾಡುವ ಹಕ್ಕಿಯಂತೆ ಯಾವ ಪುರುಷನ ದಾಕ್ಷಿಣ್ಯಕ್ಕೂ ಆಕೆ ಒಳಗಾಗಿರಲಿಲ್ಲ. ಇಡೀ ಮಂದಿಯೆಲ್ಲಾ ಒಂದೇ ಬಳಗ, ಒಂದೇ ಜನಾಂಗ. ಬಳಗದ ಪುರುಷರೆಲ್ಲ ತಂದೆಗಳೇ. ಆಕೆಯ ಒಲವು ಇಷ್ಟವಾದವನೊಂದಿಗೆ ಪುರುಷನಂತೆ ಮಹಿಳೆ ಹಣ್ಣುಹಂಪಲು ಕೊಡಿಸುವಳು, ಬೇಟೆಯಾಡುವಳು, ಕಾಳಗದಲ್ಲಿ ಹಗೆಯ ಮೇಲೆ ಕಲ್ಲು ಕೊಡಲಿ ಬೀಸುವಳು. ಕಾಳಗದಲ್ಲಿ ಹೆಣ್ಣು–ಗಂಡೆಂಬ ಭೇದವಿರಲಿಲ್ಲ. ಬಿಲ್ಲು, ಕವಣೆಕಲ್ಲು, ಕೊಡಲಿಗಳೇ ಅವಳ ಆಯುಧಗಳಾಗಿದ್ದವು. ಹೆಣ್ಣು ಸ್ವತಂತ್ರವಾದ ಪರಿವಾರಗಳನ್ನು ಕಟ್ಟುತ್ತಿದ್ದಳು.

ಹುಟ್ಟುತ್ತಿದ್ದ ಮಕ್ಕಳಿಗೆ ಯಾರ ತಂದೆ ಯಾರೆಂದು ನಿಶ್ಚಯಿಸುವುದು ಕಷ್ಟವಾಗುತ್ತಿತ್ತು. ಒಬ್ಬಳಿಗೆ ಎಷ್ಟೋ ಮಂದಿ ಸೋದರ ಪತಿಯರಿರುತ್ತಿದ್ದರು. ತನ್ನ ಪರಿವಾರದಲ್ಲಿನ ನಾಯಕಿ ಆ ಸಂತಾನದಲ್ಲಿ ಬಲಿಷ್ಠಳಾಗಿದ್ದು ತನ್ನ ಗುಂಪನ್ನು ಬೆಳೆಸುವ ಹೊಣೆಗಾರಿಕೆಯುಳ್ಳವಳಾಗಿದ್ದಳು. ಎಷ್ಟೋ ಬಾರಿ ಬೇಟೆಯ ಸಂದರ್ಭದಲ್ಲಿ ಮನುಷ್ಯರನ್ನು ಪ್ರಾಣಿಗಳೇ ಬೇಟೆಯಾಡಿ ಕೊಂದುಬಿಡುತ್ತಿದ್ದವು. ಅಂತಹ ಸಂದರ್ಭಗಳಲ್ಲಿ ಗುಂಪಿನಲ್ಲಿದ್ದ ಜನರ ಸಂಖ್ಯೆ ಕಡಿಮೆಯಾಗುತ್ತಿತ್ತು. ಆಗ ಜನಾಂಗದ ಉತ್ಪತ್ತಿಗೆ ಮುಂದಾಗುತ್ತಿದ್ದಳು. ಶಾರೀರಕ ಮತ್ತು ಆರ್ಥಿಕ ಉತ್ಪನ್ನದ ಜವಾಬ್ದಾರಿ ಹೆಣ್ಣಿನದೇ ಆಗಿತ್ತು. ಆಗ ಸ್ತ್ರೀಯೇ ಉಪಭೋಕ್ತೆ, ಪುರುಷ ಅವಳ ಅಧೀನನಾಗಿರುತ್ತಿದ್ದನು. ಅಂತಹ ಸಂದರ್ಭಗಳಲ್ಲಿ ಅನೇಕ ವೀರ್ಯಗಳಿಗೆ ಒಂದೇ ರಜಃಕ್ಷೇತ್ರವಿರುವಂತಾಗಿ ಪರಿವಾರದ ವೃದ್ಧಿಗೆ ಹೆಣ್ಣಿನ ಮುದಿತನ ತಡೆಯಾದಾಗ ಆ ಸಂತಾನದ ಮುಖ್ಯಸ್ಥೆ ಹಿಂದೆ ಸರಿದು, ಅದೇ ಸಂತಾನದಲ್ಲಿಯೇ ಬಲಿಷ್ಠಳಾದ ಹೆಣ್ಣು ಗುಂಪಿನ ನಾಯಕಿಯಾಗುತ್ತಿದ್ದಳು. ತನ್ನ ಪ್ರೇಮರಂಗಿನ ಮಿಲನದಿಂದ ಮಹಿಳೆ ಪುರುಷನಿಂದ ಅಗತ್ಯವಾದ ಭಾವನೆಯ ಆಧಾರದ ಮೇಲೆ ಗಮನಸೆಳೆದು ಪರಿವಾರವನ್ನು ಬೆಳೆಸುತ್ತಿದ್ದಳು.

ಮಹಿಳೆಯನ್ನು ಹೀನಾಯವಾಗಿ ನಡೆಸಿಕೊಳ್ಳುತ್ತಿದ್ದ ಮತ್ತೊಂದು ಪದ್ಧತಿ ಎಂದರೆ ಗುಲಾಮಗಿರಿ. ಯುದ್ಧಗಳಲ್ಲಿ ಹೋರಾಡಿ ಜಯಶೀಲರಾದ ದೊರೆಗಳಿಗೆ ಸೋತವನು ಎಲ್ಲವನ್ನೂ ಒಪ್ಪಿಸಿ ಹೆಣ್ಣನ್ನು ತನ್ನ ಬಳಿ ಇದ್ದ ಗುಲಾಮರನ್ನು ಒಪ್ಪಿಸುತ್ತಿದ್ದನು. ಅಲ್ಲದೆ ಯುದ್ಧಗಳ ಸಮಯದಲ್ಲಿ ಸೆರೆಸಿಕ್ಕ ಸೈನಿಕರನ್ನೂ ಗುಲಾಮರನ್ನಾಗಿಯೇ ನಡೆಸಿಕೊಳ್ಳಲಾಗುತ್ತಿತ್ತು. ಅವರು ರಾಜನಿಗೆ ಜೀತದಾಳುಗಳು. ಗುಲಾಮ ಒಬ್ಬನೇ ಆಗಿರುತ್ತಿರಲಿಲ್ಲ, ಆತನ ಹೆಂಡತಿ ಮಕ್ಕಳು ಎಲ್ಲರೂ ಗುಲಾಮರೇ ಆಗಿರುತ್ತಿದ್ದರು. ಎಷ್ಟೋ ಬಾರಿ ಗುಲಾಮರು ತನ್ನ ಮಗಳನ್ನೋ, ಮಗನನ್ನೋ ಮದುವೆ ಮಾಡಲು ತನ್ನ ಒಡೆಯನ ಅಪ್ಪಣೆ ಪಡೆಯಬೇಕಾಗಿತ್ತು. ಮಹಿಳೆಯನ್ನು ಪ್ರಾಚೀನ ಭಾರತೀಯ ಸಮಾಜ ಕಂಡಿರುವುದಕ್ಕಿಂತ ಭಿನ್ನವಾಗಿ ಪ್ರಾಚೀನ ಗ್ರೀಸಿನ ಪ್ರಜಾಪ್ರಭುತ್ವ ಸಮಾಜ ಕಂಡಿಲ್ಲ. ಪ್ರಾಚೀನ ಕಾಲದಿಂದಲೂ ಪುರುಷರು ಆಕ್ರಮಣಕಾರರಾಗಿಯೇ ಮಹಿಳೆಯರನ್ನು ನೋಡಿದಂತಿದೆ.

ನಾಗರಿಕತೆಯ ಪೂರ್ವಯುಗದಲ್ಲಿದ್ದ ಮಹಿಳೆಯನ್ನು ನೋಡಿದರೆ ಬಂಧುತ್ವ ಸಮಾಜ ನಿರ್ಮಾಣಗೊಂಡಿರುವುದು ಮಹಿಳೆಯಿಂದಲೇ ಎಂಬುದು ಸ್ಪಷ್ಟವಿದೆ. ಬದುಕನ್ನು ಕಟ್ಟುವಲ್ಲಿ ಮಹಿಳೆಯ ಶಕ್ತಿ ಸಾಮರ್ಥ್ಯ ಎದ್ದು ಕಾಣುತ್ತದೆ.

ಪುರುಷನಿಗಿಂತಲೂ ಅಪ್ರತಿಮ ಬುದ್ಧಿಶಾಲಿಯಾಗಿ ಮಹಿಳೆ ಗೋಚರಿಸುತ್ತಾಳೆ. ಜನಾಂಗವನ್ನೇ ಆಕೆ ಸೃಷ್ಟಿಸುತ್ತಾ, ನಿರ್ಮಿಸುತ್ತಾ ಸಮಾಜವನ್ನೇ ರೂಪಿಸುವುದನ್ನು ನೋಡಿದರೆ ಎಂಥವರಿಗೂ ಮಹಿಳೆಯ ಮೇಲೆ ಗೌರವ ಹುಟ್ಟುತ್ತದೆ. ಮಹಿಳೆ ಯಾರನ್ನು ವಿವಾಹವಾಗಬೇಕು, ಯಾರನ್ನು ಆಗಬಾರದು, ಮಹಿಳೆ ಸಾಮಾಜಿಕವಾಗಿ ಯಾವ ಕಾರ್ಯ ನಿರ್ವಹಿಸಬೇಕು, ಯಾವುದನ್ನು ನಿರ್ವಹಿಸಬಾರದು. ಹೆಣ್ಣಿನ ಆಚಾರ-ವಿಚಾರಗಳು ಹೇಗಿರಬೇಕೆಂದು ಪುರುಷ ನಿರ್ಬಂಧಿಸುತ್ತಿದ್ದಂತೆಯೇ ಮಹಿಳೆಯ ಸ್ವಾಭಾವಿಕ ಬದುಕಿಗೆ ಧಕ್ಕೆ ಒದಗಿದೆ. ವಿಧಿ ನಿಷೇಧಗಳಲ್ಲಿ ಮಹಿಳೆಯನ್ನು ಕಟ್ಟಿಹಾಕಿರುವುದನ್ನು ನಾಗರಿಕ ಪೂರ್ವಯುಗದಲ್ಲಿಯೇ ಕಾಣುತ್ತೇವೆ.[೧]

### ೧.೨. ಶಿಲಾಯುಗದಲ್ಲಿ ಸ್ತ್ರೀಯರ ಚಿತ್ರಣ

ಕ್ರಿ.ಪೂ.೧೨೦೦ ವರ್ಷಗಳ ಹಿಂದೆ ಅಂದರೆ ನವಶಿಲಾಯುಗದಲ್ಲಿಯೇ ಪುರುಷರನ್ನು ಆಕರ್ಷಿಸಲು ಮಹಿಳೆಯರು ಅಲಂಕಾರದ ಗೊಂಬೆಗಳಂತೆ ಮೈಗೆ ಬಣ್ಣಗಳನ್ನು ಲೇಪಿಸಿಕೊಂಡು ಮಣ್ಣು, ಕಲ್ಲು, ಬಿದಿರು, ಲೋಹಗಳಿಂದ ಮಾಡಿದ ಅಂದಿಗೆ, ಹಾರ, ಮೂಗುತಿ, ಓಲೆ, ಬಳೆಗಳನ್ನು ಧರಿಸಿಕೊಂಡು ಮುಖಚೂರ್ಣ ಮತ್ತು ಕಾಡಿಗೆಗಳನ್ನು ಕಣ್ಣು, ತುಟಿ, ಅಂಗೈ ಮತ್ತು ಉಗುರುಗಳಿಗೆ ಹಚ್ಚಿಕೊಳ್ಳುತ್ತಿದ್ದುದು, ಅವುಗಳನ್ನು ಸಂಗ್ರಹಿಸಿಡಲು ದಂತ, ಶಿಲೆ ಮತ್ತು ಮಣ್ಣಿನ ಭರಣಿಗಳನ್ನು ಬಳಸುತ್ತಿದ್ದುದು ಶಿಲಾಯುಗದ ಸಂಶೋಧನೆಯಿಂದ ತಿಳಿದುಬಂದಿದೆ. ಇದರಿಂದ ಹೆಣ್ಣು ತನ್ನ ಸಹಜ ಆಸೆ-ಆಕಾಂಕ್ಷೆಗಳನ್ನು ಪೂರೈಸಿಕೊಳ್ಳಲು ಅನುವಾಗುವಂತೆ ಪುರುಷನನ್ನು ಸೆಳೆಯಲು ಅಲಂಕಾರಕ್ಕೆ ಮಹತ್ವವನ್ನು ನೀಡಿದ್ದಾಳೆ. ಮಹಿಳೆಯ ಬಹುದೊಡ್ಡ ಆಸೆ ಎಂದರೆ ತನ್ನನ್ನು ಭೋಗಿಸುವನನ್ನು ಹತೋಟಿ-ಯಲ್ಲಿಟ್ಟುಕೊಳ್ಳಬಯಸುವುದು. ಅವನ ಆಕ್ರಮಣಶೀಲತೆಯನ್ನು ತಹಬದಿಗೆ ತರುವುದು, ತನ್ನ ಬಳಿ ಬರುವವನು ತನ್ನನ್ನೇ ಮೆಚ್ಚಬೇಕು, ಅವನ ಎಲ್ಲ ಬೇಕು-ಬೇಡಗಳನ್ನು ತನ್ನ ಮೂಲಕವೇ ಪೂರೈಸಿಕೊಳ್ಳಬೇಕು. ಆದ್ದರಿಂದಲೇ ಶಿಲಾಯುಗದ ಮಹಿಳೆ ಪುರುಷನ ಮನಸೆಳೆಯುವ ಕೋಮಲತೆಯನ್ನು ಮೈಗೂಡಿಸಿಕೊಂಡಿರುವಂತಿದೆ.

ಶಿಲಾಯುಗದ ಮಹಿಳೆಗೆ ಮುಟ್ಟು, ಸಂಭೋಗ, ಗರ್ಭಧರಿಸುವಿಕೆ ಮಕ್ಕಳನ್ನು ಹಡೆಯುವುದು ಮುಂತಾದ ಜೈವಿಕ ಕ್ರಿಯೆಗಳ ಸಂದರ್ಭದಲ್ಲಿ ಕೆಲ ಸಮಯವಾದರೂ

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೮, ೯, ೧೧, ೧೫, ಕರ್ತೃ: ಡಾ. ಹಾಲತಿ ಸೋಮಶೇಖರ್.

ಒಂದೆಡೆ ಉಳಿಯಬೇಕಾದ ಅನಿವಾರ್ಯತೆ ಉಂಟಾಗಿದೆ. ಬಹುಶಃ ಮಹಿಳೆ ಆ ಹೊತ್ತಿನಲ್ಲಿ ಪುರುಷನೊಂದಿಗೆ ಬೇಟೆಗಾಗಿ ಕಾಡುಮೇಡು ಸುತ್ತಲಾಗದೆ ಪರಿಸ್ಥಿತಿಗೆ ಒಳಗಾಗಿದ್ದಾಳೆ. ಇಂಥ ಜೈವಿಕವಾದ ಅಡಚಣೆಗಳನ್ನು ನಿವಾರಿಸಿಕೊಳ್ಳಲು ಸಾಂದರ್ಭಿಕವಾಗಿ ಆದಿಮಾನವ ಸುರಕ್ಷಿತ ಪ್ರದೇಶಗಳನ್ನು ಹುಡುಕಿಕೊಂಡಿರಬಹುದು. ಅವುಗಳೆಂದರೆ ಕಲ್ಲಿನ ಗುಹೆ, ಮರದ ಪೊಟರೆ, ನದಿ ತೀರದಲ್ಲಿನ ಪೊದೆಗಳು ವಾಸ್ತವ್ಯಕ್ಕೆ ಅನುಕೂಲವಾಗಿ ಕಂಡಿರಬೇಕು. ಆಗ ಪುರುಷ ಮಹಿಳೆಯನ್ನು ಒಂದೆಡೆ ಸುರಕ್ಷಿತವಾಗಿ ಬಿಟ್ಟು ತಾನು ಬಿಲ್ಲು, ಬಾಣ, ಕಲ್ಲಿನ ಆಯುಧಗಳನ್ನು ಹಿಡಿದು ಬೇಟೆಯಾಡಿ ಆಹಾರ ಪದಾರ್ಥಗಳನ್ನು ತಂದು ಹೆಣ್ಣಿಗೆ ನೀಡಿರುವಂತೆ ತೋರುತ್ತದೆ. ಇದರಿಂದಾಗಿ ಮಹಿಳೆಯಲ್ಲಿ ಮೂಲಭೂತವಾಗಿರುವ ಮಗುವಿನ ಲಾಲನೆ-ಪಾಲನೆ, ಆರೈಕೆಗಳು ತನ್ನನ್ನು ಭೋಗಿಸುವ ಪುರುಷನಿಗೂ ವಿಸ್ತರಿಸಿಕೊಂಡಂತೆ ಕಾಣುತ್ತದೆ.

ಪುರುಷ ಕಾಡಿನಲ್ಲಿ ತಿರುಗಿ ಬೇಟೆಯಾಡಿ ಆಹಾರ ಸಂಪಾದನೆ ತರುವುದು. ಹೆಂಗಸು ಅದನ್ನು ಶುಚಿಗೊಳಿಸಿ, ಬೇಯಿಸಿಕೊಡುವುದು. ಇದರಿಂದ ಆರೈಕೆಯ ಸಂಸ್ಕೃತಿ ಮಹಿಳೆಗೆ, ಉತ್ಪಾದನೆ ಪುರುಷನಿಗೆ ಎಂಬಂತೆ ಭಾವಿಸಿದಂತಿದೆ. ಈ ಬಗೆಯ ಭಾವನೆಯೇ ಮುಂದೆ ಕುಟುಂಬ ವ್ಯವಸ್ಥೆಯ ಅಸ್ತಿತ್ವಕ್ಕೆ ಕಾರಣವಾದಂತಿದೆ. ಹೊರಗೆ ಬೇಟೆಯಾಡಲು ಪುರುಷ, ಒಳಗೆ ಸತ್ಕರಿಸಲು ಮಹಿಳೆ ಎಂಬ ಪರಿಸ್ಥಿತಿ ನಿರ್ಮಾಣವಾದುದ್ದು ಒಂದು ಬಗೆಯ ಸ್ತ್ರೀ-ಪುರುಷ ಭಿನ್ನತೆಯನ್ನು ಹುಟ್ಟು ಹಾಕಿರಬಹುದು. ಇವತ್ತಿನ ಲಿಂಗ ಅಸಮಾನತೆಯ ಘೋರ ದುರಂತದ ಸಾಮಾಜಿಕ ವ್ಯವಸ್ಥೆ ಅಂದು ಇಲ್ಲದಿರಬಹುದು. ಆದರೆ ಆದಿಮಾನವರಲ್ಲಿಯೂ ಸ್ತ್ರೀ-ಪುರುಷರು ಪರಸ್ಪರ ಅವಲಂಬಿತರಾದದ್ದು ಅವರಲ್ಲಿ ಪುರುಷನೇ ಮೇಲುಗೈ ಸಾಧಿಸಿರುವುದನ್ನು ಅಲ್ಲಗಳೆಯಲಾಗುವುದಿಲ್ಲ.

ಮಹಿಳೆ ಸ್ವಭಾವತಃ ಬಯಸುವುದು ಮಾಂಸಖಂಡಗಳಿಂದ ಕುಡಿದ ಬಲಿಷ್ಠವಾದ ಮೈಕಟ್ಟಿನ ಒರಟುತನದ ದೇಹವನ್ನು. ಆಕೆಗೆ ಲೈಂಗಿಕ ತೃಪ್ತಿಗಿಂತ ಮೀರಿದ ಪುರುಷತ್ವದ ಛಲ, ವೈಶಿಷ್ಟ್ಯತೆ ಮೆರೆಯುವ ಪುರುಷನನ್ನು ಬಯಸುವುದು. ಪುರುಷನ ಬಣ್ಣ, ರೂಪು, ಲಕ್ಷಣಗಳೆಲ್ಲಾ ಮಹಿಳೆಗೆ ಅಷ್ಟೇನೂ ಮುಖ್ಯವಲ್ಲ. ಆದರೆ ಪುರುಷ ಇದಕ್ಕೆ ತದ್ವಿರುದ್ಧ. ಸುಂದರಳಾದ, ಆಕರ್ಷಕ ಮೈಬಣ್ಣದ, ಮೃದು ಶರೀರದ, ಬಳುಕುವ ಸೊಂಟದ, ವಿಧೇಯಳಾದ ಸತ್ಕಾರ ಗುಣದ ಮಹಿಳೆಯನ್ನು ಪುರುಷ ಬಯಸುತ್ತಿರುತ್ತಾನೆ. ಇದು ಪುರುಷನ ದೌರ್ಬಲ್ಯವೂ ಹೌದು. ಆದ್ದರಿಂದ ಮಹಿಳೆ ಪುರುಷನನ್ನು ತನ್ನ ಹತೋಟಿಗೆ ತೆಗೆದುಕೊಳ್ಳಲು ಪುರುಷ ಬಯಸುವ ರೀತಿಯಲ್ಲಿ

ಬದಲಾದಂತೆ ಕಾಣುತ್ತದೆ. ಆದ್ದರಿಂದಲೇ ಶಿಲಾಯುಗದಲ್ಲಿಯೇ ನಮಗೆ ಹೆಚ್ಚಾಗಿ ಕಂಡುಬರುವುದು ಮಹಿಳೆಯರ ಆಭರಣ ವಿಶೇಷಗಳು ಹಾಗೂ ಅಲಂಕಾರ ವಸ್ತುಗಳೇ ಆಗಿವೆ.

ಶಿಲಾಯುಗದಲ್ಲಿ ಮಹಿಳೆ ಕುಟುಂಬದ ಕಣ್ಣಾಗುತ್ತಿದ್ದಂತೆಯೇ ಆಕೆ ಉತ್ಪಾದನಾ ಕಾರ್ಯದಿಂದ ದೂರವಾದಳು. ಹೊಲದಲ್ಲಿ ಕೃಷಿಕಳಾಗಿ ನೇಗಿಲಿನಿಂದ ಉಳುಮೆ ಮಾಡಿ ಬೆಳೆ ಬೆಳೆಯುತ್ತಿದ್ದ ಮಹಿಳೆ ಪುರುಷನ ಮನಸೆಳೆಯುವ ಕೋಮಲತೆಯನ್ನು ತನ್ನ ಕಾಯಕವೆಂಬಂತೆ ಭಾವಿಸಿಧಾಗ ವಿಧಿ-ನಿಷೇಧಗಳು ಹುಟ್ಟಿಕೊಂಡವು. ನೇಗಿಲಿನಿಂದ ಹೊಲ ಉಳುವುದು ಸ್ತ್ರೀಯರಿಗೆ ತಕ್ಕ ಕಾರ್ಯವಲ್ಲ. ಅದೇನಿದ್ದರೂ ಪುರುಷನ ಕೆಲಸ. ಮಹಿಳೆಯರು ಕುಟುಂಬ, ಮಕ್ಕಳ ಲಾಲನೆ-ಪಾಲನೆ, ಪಶುಪಾಲನೆ, ಕುಟುಂಬದ ಆರೈಕೆಗೆ ಸೀಮಿತ ಎಂಬ ಅಭಿಪ್ರಾಯಗಳು ಬರತೊಡಗಿದಂತೆ ಕಾಣುತ್ತವೆ. ಮಹಿಳೆ ವ್ಯವಸಾಯ ಮತ್ತು ಪಶುಸಂಗೋಪನೆಯಲ್ಲಿ ತೊಡಗಿದಾಗ ಸ್ತ್ರೀ ಪ್ರಾಧಾನ್ಯತೆ ಇದ್ದು ಉತ್ಪಾದನಾ ಕಾರ್ಯದಲ್ಲಿ ತೊಡಗಿದ್ದಳು. ಪುರುಷನು ಆಕೆಯ ಸ್ಥಾನವನ್ನು ಆಕ್ರಮಿಸಿಕೊಂಡ. ಮಾತ್ರವಲ್ಲ ತಾನು ಬಲಿಷ್ಠ, ಸಂಪಾದಿಸಲು ಗಳಿಸಲು, ದುಡಿಯಲು ತಕ್ಕವನು. ಮಹಿಳೆಯಾದವಳು ವಂಶೋದ್ಧಾರಕಿ, ತನ್ನ ದುಡಿಮೆಯಿಂದ ಆಕೆಯನ್ನು ಸಾಕುವವನು, ನನ್ನ ಆಸೆ-ಆಕಾಂಕ್ಷೆಗೆ ಆಕೆ ಮೀಸಲು ಆಕೆ ದುರ್ಬಲೆ ಎಂಬ ಅಸಮಾನತೆಯ ಕಲ್ಪನೆ ಪುರುಷನಲ್ಲಿ ಬೆಳೆಯತೊಡಗಿತು. ಹೀಗೆ ಪುರುಷ ಯೋಚಿಸುತ್ತಿದ್ದಂತೆಯೇ ಮಹಿಳೆ ಮಾನವ ಕ್ರೌರ್ಯಕ್ಕೆ ಹಿಂಸೆಗೆ ಬಲಿಯಾಗ-ಲಾರಂಭಿಸಿದಳು. ಶಿಲಾಯುಗದ ಆದಿಮಾನವನಿಂದ ಆರಂಭವಾದ ಇಂಥ ಕ್ರೌರ್ಯ ಮಹಿಳೆಯ ಮೇಲೆ ಇಂದಿಗೂ ನಿಂತಿಲ್ಲ.[೧]

ಮಹಿಳೆ-ಪುರುಷರಿಲ್ಲದೆ ಸಮಾಜದ ಅಸ್ತಿತ್ವವನ್ನೇ ಗುರುತಿಸಲಾಗುವುದಿಲ್ಲ. ಆದ್ದರಿಂದ ಮಹಿಳೆ-ಪುರುಷರಿಬ್ಬರೂ ಸಮಾನರು ಮತ್ತು ಮುಖ್ಯರು. ಅವರಿಬ್ಬರೂ ಸಮಾಜದಲ್ಲಿ ಸದಾ ಒಟ್ಟಿಗೆ ಬಾಳುವವರಾಗಿರುತ್ತಾರೆ. ಪರಸ್ಪರ ಅವಲಂಬಿಸಿಯೇ ಇರುತ್ತಾರೆ. ಆದ್ದರಿಂದ ಮಹಿಳೆ-ಪುರುಷರಿಬ್ಬರೂ ಸಮಾಜದ ಎರಡು ಕಣ್ಣುಗಳು. ಅವರಿಂದಲೇ ಮಾನವ ಜನಾಂಗದ ಜನನ. ಆದರೆ ಸಮಾಜದಲ್ಲಿ ಮಹಿಳೆಯರನ್ನು ನೋಡುವ ರೀತಿ-ನೀತಿಗಳೇ ಬೇರೆ ಮತ್ತು ಪುರುಷನನ್ನು ನೋಡುವ ರೀತಿನೀತಿಗಳೇ ಬೇರೆ. ಬದುಕಿನ ಜಟಕಾಬಂಡಿಯ ಎರಡು ಚಕ್ರಗಳಂತಿರುವ ಮಹಿಳೆ-ಪುರುಷರಲ್ಲಿ

---

೧. ಮಹಿಳಾ ಚಳವಳಿ - ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೧೬ರಿಂದ ೨೦, ಕರ್ತೃ: ಡಾ. ಹಾಲತಿ ಸೋಮಶೇಖರ್.

ಏಕಿಂಥ ಭಿನ್ನಾಭಿಪ್ರಾಯ? ಭೇದ-ಭಾವ, ಬಿರುಕು. ಎಲ್ಲರೂ ಸ್ವತಂತ್ರರಾಗಿ ಜನಿಸಿದ್ದಾರೆ. ಪ್ರತಿಯೊಬ್ಬರಿಗೂ ವ್ಯಕ್ತಿತ್ವದ ಘನತೆಯಿದೆ, ಹಕ್ಕುಗಳಲ್ಲಿಯೂ ಸಮಾನತೆಯಿದೆ. ಆದ್ದರಿಂದ ಭೇದಭಾವಕ್ಕೆ ಪ್ರೇರಣೆ ನೀಡದೆ ಎಲ್ಲಾ ಸನ್ನಿವೇಶ-ಗಳಲ್ಲಿಯೂ ಮಹಿಳೆ-ಪುರುಷರು ಮನುಷ್ಯರಾಗಿ ವರ್ತಿಸುವುದನ್ನು ಕಲಿಯಬೇಕು.

ಒಟ್ಟಾರೆ ಶಿಲಾಯುಗದ ಸಂಸ್ಕೃತಿ ಆಧುನಿಕ ಮನುಷ್ಯ ಸ್ವಯಂ ಸೃಷ್ಟಿಸಿಕೊಂಡಿರುವ ಸ್ತ್ರೀ-ಪುರುಷರ ನಡುವಿನ ಅಸಮಾನತೆಯತ್ತ ಬೆಳಕು ಚೆಲ್ಲುತ್ತದೆ. ಮಾನವೀಯ ಬಿಂದುವಿನಲ್ಲಿ ಸಮಾನತೆಯ ನಂಬಿಕೆಯನ್ನು ಹುಟ್ಟಿಸುತ್ತದೆ.

**೧.೩. ಪ್ರಾಚೀನ ನಾಗರಿಕತೆಗಳಲ್ಲಿ ಮಹಿಳೆಯ ಸ್ಥಿತಿಗತಿಗಳು**

ಪ್ರಾಚೀನ ನಾಗರಿಕತೆಗಳಲ್ಲಿ ಮಹಿಳೆಯರ ಸಾಮಾಜಿಕ ಬದುಕನ್ನು ಕುರಿತು ಹೆಚ್ಚಿನ ಚಿಂತನೆ ನಡೆದಿಲ್ಲ. ಮಾನವನ ಇತಿಹಾಸದಲ್ಲಿ ಪುರುಷರು ತಮ್ಮ ಸ್ವಾರ್ಥಕ್ಕಾಗಿ ಸ್ತ್ರೀಯರನ್ನು ಧರ್ಮ, ರೂಢಿ, ಸಂಪ್ರದಾಯಗಳನ್ನು ಮುಂದುಮಾಡಿಕೊಂಡು ಅತ್ಯಂತ ವ್ಯವಸ್ಥಿತವಾಗಿ ನಿಯಂತ್ರಿಸಿಕೊಂಡು ಬಂದಿರುವುದನ್ನು ಇತಿಹಾಸ ಹೇಳುತ್ತದೆ. ಆದ್ದರಿಂದ ಸ್ತ್ರೀಯರ ಮೇಲಾಗುತ್ತಿರುವ ಅನ್ಯಾಯ ಅತ್ಯಂತ ಪ್ರಾಚೀನವಾದದ್ದು, ಅದು ಪ್ರಾಚೀನ ನಾಗರಿಕತೆಗಳ ಸಂದರ್ಭದಿಂದಲೂ ಇದ್ದುದೇ ಆಗಿದೆ.

ಹಿಂದೂ ಸ್ತ್ರೀಯರಿಗೆ ಪವಿತ್ರವೆನಿಸುವ ಅರಿಸಿನ, ಕುಂಕುಮ, ಬಳೆ, ಕರಿಮಣಿ, ಮಾಂಗಲ್ಯ ಮುಂತಾದವು ದೊರೆತಿದ್ದು ಇವುಗಳನ್ನು ಧರಿಸುತ್ತಿದ್ದವರು ಸಮಾಜದ ಗೌರವಕ್ಕೆ ಪಾತ್ರರಾಗುತ್ತಿದ್ದರಿಂದ, ಇವುಗಳನ್ನು ಧರಿಸದ ಸ್ಥಿತಿಗೆ ಬಂದ ಮಹಿಳೆಯರು ಸಮಾಜದ ತಾತ್ಸಾರಕ್ಕೆ ಒಳಗಾಗುತ್ತಿದ್ದುದು ಸಾಮಾನ್ಯವಾಗಿ ನಡೆದುಕೊಂಡು ಬಂದಿದೆ. ಅಂದರೆ ಗಂಡನನ್ನು ಹೊಂದಿರುವವಳು ಮಾತ್ರ ಬದುಕಿಗೆ ಅರ್ಹಳೆಂಬಂತೆ ಭಾವಿಸಿರುವುದರಿಂದ ಗಂಡನನ್ನು ಕಳೆದುಕೊಂಡವಳು ಬದುಕುವಂತಿಲ್ಲ ಎಂದು ನಂಬಿದಂತಿದೆ. ಆದ್ದರಿಂದ ಮುಂದೆ ಸತಿಸಹಗಮನ ಸಾಮಾಜಿಕ ಪದ್ಧತಿಯಾಗಿ ಕಡ್ಡಾಯವಾಗಿ ಜಾರಿಗೊಳ್ಳಲು ಸಿಂಧೂ ನಾಗರಿಕತೆಯಲ್ಲಿಯೇ ಸುಳಿವುಗಳು ಸಿಗುತ್ತವೆ.

ಪ್ರಾಚೀನ ನಾಗರಿಕತೆಗಳಲ್ಲಿಯೂ ಮಹಿಳೆಯರು ಆಭರಣಪ್ರಿಯರಾಗಿದ್ದು, ಪುರುಷರು ಕೆಲವು ಆಭರಣಗಳನ್ನು ಧರಿಸುತ್ತಿದ್ದುದು ಕಂಡುಬರುತ್ತದೆ. ಬಹಳ ಮುಖ್ಯವಾಗಿ ಸ್ತ್ರೀಯರು ತಮ್ಮ ತಲೆಯ ಕೂದಲನ್ನು ಅತ್ಯಂತ ವೈವಿಧ್ಯಮಯವಾಗಿ ಕಟ್ಟುತ್ತಿದ್ದುದಲ್ಲದೆ ಡಾಬು, ಒಡ್ಯಾಣ, ಓಲೆ, ಅಂದಿಗೆ, ಬಳೆ, ಮಣಿಸರ, ಕೇಶಬಂಧಿ

ಮುಂತಾದ ಆಭರಣಗಳನ್ನು ಧರಿಸುತ್ತಿರುವುದು ಕಂಡುಬರುವುದರಿಂದ ಮಹಿಳೆಯರ ಆಭರಣಾಂಕ್ಷೆ ತುಂಬಾ ಪುರಾತನವಾದದೆಂಬುದು ತಿಳಿದುಬರುತ್ತದೆ. ಆದ್ದರಿಂದ ಆಭರಣ ವ್ಯಾಮೋಹ ಮಹಿಳೆಯರನ್ನು ಅವಲಂಬನೆಗೆ ಸೀಮಿತಗೊಳಿಸಿರುವುದನ್ನು ಅಲ್ಲಗಳೆಯಲಾಗುವುದಿಲ್ಲ.

ಪ್ರಾಚೀನ ನಾಗರಿಕತೆಗಳಲ್ಲಿ ಮಹಿಳೆಯರನ್ನು ಕುರಿತ ಸಂಗತಿಗಳು ಬರುವುದು ಕಡಿಮೆ. ಇದಕ್ಕೆ ಕಾರಣ ಬಹುಶಃ ಈವರೆಗೆ ಇತಿಹಾಸವನ್ನು ಬರೆದವರೆಲ್ಲ ಪುರುಷರೇ ಆಗಿರುವುದು. ಜೊತೆಗೆ ಮಹಿಳೆಯರ ಸಾಮಾಜಿಕ ಬದುಕನ್ನು ಗಂಭೀರವಾಗಿ ಪರಿಗಣಿಸುವ ಅವಶ್ಯಕತೆ ಇತಿಹಾಸ ತಜ್ಞರಿಗೆ ಕಂಡುಬಂದಿಲ್ಲದಿರುವುದು. ಮಹಿಳೆಯ ಸ್ಥಾನಮಾನ ಕುರಿತಂತೆ ಪ್ರಾಚೀನ ನಾಗರಿಕತೆಯಲ್ಲಿ ಹೆಣ್ಣಿಗೆ ವಿಶಿಷ್ಟ ಸ್ಥಾನಮಾನಗಳು ಇರುವುದು ಕಂಡುಬರುತ್ತದೆ. ಮಾನವನ ಮೂಲ ಕುರಿತಂತೆ ದೊರೆತಿರುವ ಪ್ರಾಚೀನ ಸಾಕ್ಷ್ಯಾಧಾರಗಳನ್ನು ಗಮನಿಸಿದರೆ ಆಗಿನ ಜೀವನ ಸ್ಥಿತಿ, ಸ್ಥಳೀಯ ರೂಢಿಗಳಲ್ಲಿ ಸ್ತ್ರೀ–ಪುರುಷರಲ್ಲಿ ಭೇದ ಕಂಡುಬರುವುದಿಲ್ಲ. ಕ್ರಿ.ಪೂ.ದಲ್ಲಿಯೇ ಮಹಿಳೆ ಇಂದಿನ ಯುರೋಪಿಯನ್ ಸಮಾಜದಲ್ಲಿರುವ ಮಹಿಳೆಗಿಂತ ಉನ್ನತ ಸ್ಥಾನಮಾನವನ್ನು ಹೊಂದಿದ್ದಳೆಂಬುದನ್ನು ದೃಢಪಡಿಸುತ್ತದೆ. ವಾಸ್ತವವಾಗಿ ಸ್ತ್ರೀ–ಪುರುಷರಲ್ಲಿ ಭೇದವೆಣಿಸುವುದು ಮನುಷ್ಯ ಸಂಸ್ಕೃತಿಯಲ್ಲ.

ಪ್ರಾಚೀನ ನಾಗರಿಕತೆಯಲ್ಲಿ ಮಹಿಳೆಯೇ ಕುಟುಂಬದ ಹಿರಿಯಳಾಗಿದ್ದು ಸಮಸ್ತ ಆಸ್ತಿಗೆ ಒಡೆಯಳಾಗಿದ್ದಳು; ಆಸ್ತಿಯ ಉತ್ತರಾಧಿಕಾರದ ಹಕ್ಕನ್ನು ಹೊಂದಿದ್ದು ಮನೆಯ ಯಜಮಾನಿಯೆಂದು ಪರಿಗಣಿಸಲ್ಪಡುತ್ತಿದ್ದಳು. ಪ್ರಾಚೀನ ಕುಟುಂಬಗಳಲ್ಲಿ ಯಾರು ಕುಟುಂಬದ ಯಜಮಾನಿ ಎಂಬುದರ ಆಧಾರದ ಮೇಲೆ ಉಳಿದ ವಿಷಯಗಳು ನಿರ್ಧಾರವಾಗುತ್ತಿದ್ದವು. ಇಂಥ ಸಮಾಜದಲ್ಲಿ ಸಹಜವಾಗಿ ಹೆಣ್ಣು ಗಂಡಿಗಿಂತ ಪ್ರಭುತ್ವ ಹೊಂದಿದ್ದಳು. ಇದು ಮಾತೃ ಪ್ರಧಾನ ಕುಟುಂಬಕ್ಕೆ ದಾರಿ ಮಾಡಿಕೊಟ್ಟಿತು. ಅದೇ ಸಮಯದಲ್ಲಿ ತಾಯಿಯ ತಮ್ಮ ಅಥವಾ ಅಣ್ಣ ಆ ಕುಟುಂಬದ ಮೇಲೆ ಅಧಿಕಾರ ಹೊಂದಿರುತ್ತಿದ್ದನು. ಆದ್ದರಿಂದ ಪುರುಷ ಪ್ರಾಧಾನ್ಯತೆಯೂ ಇತ್ತು. ಈ ಬಗೆಯಲ್ಲಿ ವಿವಿಧ ಮಾದರಿಯ ಕುಟುಂಬಗಳು ಮತ್ತು ಸಂಬಂಧಗಳು ಪ್ರಾಚೀನ ಕಾಲದಂತೆ ಈಗಲೂ ಅಸ್ತಿತ್ವದಲ್ಲಿರುವುದನ್ನು ನೋಡಬಹುದಾಗಿದೆ. ಪ್ರಾಚೀನ ಕುಟುಂಬಗಳಲ್ಲಿ ತಮ್ಮ ಜೀವನೋಪಾಯಕ್ಕೆ ವ್ಯವಸಾಯವನ್ನು ಅವಲಂಬಿಸಿರುವ ಕುಟುಂಬಗಳಲ್ಲಿ ಹೆಣ್ಣಿನ

ಸ್ಥಾನ ಉತ್ತಮವಾಗಿದ್ದು; ಬೇಟೆಯನ್ನು ಅವಲಂಬಿಸಿ ಬದುಕುವ ಕುಟುಂಬಗಳಲ್ಲಿ ಹೆಣ್ಣಿನ ಸ್ಥಾನ ಉತ್ತಮವಾಗಿರಲಿಲ್ಲ ಎಂಬುದು ಚಾರಿತ್ರಿಕ ಸಾಕ್ಷ್ಯಾಧಾರಗಳಿಂದ ದೃಢಪಟ್ಟಿದೆ.[೧]

ಈಜಿಪ್ಟ್‌ನ ಇತಿಹಾಸಕಾರ ಹೆರೊಡೊಟಸ್‌ನು ಸ್ತ್ರೀ-ಪುರುಷರ ಅಂದರೆ ಎರಡು ವಿಭಿನ್ನ ಲಿಂಗಗಳ ನಡುವಿನ ಸಂಬಂಧವನ್ನು ಚರ್ಚಿಸಿದ್ದಾನೆ. ಅದಕ್ಕೆ ಅಥೆನ್ಸ್‌ನ ಮಹಿಳೆಯರ ಸಾಮಾಜಿಕ ಬದುಕನ್ನು ನಿದರ್ಶನಕ್ಕೆ ತೆಗೆದುಕೊಂಡಿದ್ದಾನೆ. ಅಥೆನ್ಸ್‌ನಲ್ಲಿ ಮಹಿಳೆಯರು ಸ್ವತಂತ್ರವಾದ ಮತ್ತು ಗೌರವಾನ್ವಿತ ಸ್ಥಾನವನ್ನು ಹೊಂದಿದ್ದರೆಂಬುದಾಗಿ ತಿಳಿಸುತ್ತಾನೆ. ಆದರೆ ಗ್ರೀಸ್‌ನಲ್ಲಿ ಇದಕ್ಕೆ ವಿರುದ್ಧವಾದ ಅಂದರೆ ಮಹಿಳೆಯರು ಮಕ್ಕಳನ್ನು ಹೆರುವ ಗುಲಾಮರಂತಿದ್ದರು. ಮನೆಗಳಿಗೆ ಸೀಮಿತರಾಗಿದ್ದು ಯಾವುದೇ ಹಕ್ಕುಗಳನ್ನು ಹೊಂದಿರದೆ ಅಶಿಕ್ಷಿತರಾಗಿದ್ದರು ಎಂಬುದು ತಿಳಿದುಬರುತ್ತದೆ. ಪುರುಷರ ಚರಾಸ್ತಿಯಂತೆ ಮಹಿಳೆಯರನ್ನು ನಡೆಸಿಕೊಳ್ಳಲಾಗುತ್ತಿತ್ತು, ವಿವಾಹೇತರ ಸಂಬಂಧಗಳಲ್ಲಿ ಮಾತ್ರ ಸ್ತ್ರೀ-ಪುರುಷರಲ್ಲಿ ಆತ್ಮೀಯವಾದ ಸಂಬಂಧಗಳಿದ್ದುದಾಗಿ ಕಂಡುಬರುತ್ತದೆ. ಕೆಲವು ಸ್ತ್ರೀಯರು ಬುದ್ಧಿವಂತರಾಗಿದ್ದು ಉನ್ನತ ಸಭೆಗಳಲ್ಲಿ, ಆಧ್ಯಾತ್ಮಿಕ ಚರ್ಚೆಗಳಲ್ಲಿ ಮತ್ತು ರಾಜನೀತಿಯಲ್ಲಿ ಭಾಗವಹಿಸುತ್ತಿದ್ದರೂ ಸಹ ಸಾಮಾಜಿಕವಾಗಿ ಅತಿ ಕೆಳಸ್ತರದ ಸ್ಥಾನಮಾನ ಹೊಂದಿದ್ದರು.

ನಾಗರಿಕತೆಗಳ ಕಾಲದಲ್ಲಿ ಮನುಷ್ಯ ನಗರಜೀವನಕ್ಕೆ ಬರುತ್ತಿದ್ದಂತೆಯೇ ವ್ಯವಸ್ಥೆಯ ಅಂಗವಾಗಿ ವರ್ತಿಸತೊಡಗಿದ್ದಾನೆ. ಇದು ಹೀಗೆ ಇರಬೇಕು, ಹೀಗೆ ಇರಬಾರದು, ಎಂದು ಮನುಷ್ಯ ಯೋಚಿಸಲು ಆರಂಭಿಸಿದ ದಿನದಿಂದಲೇ ವಿಧಿ, ನಿಷೇಧಗಳು, ರೂಢಿ ಸಂಪ್ರದಾಯಗಳು ಆಚರಣೆಗೆ ಬಂದವು. ಆಗ ರಾಜನ ಕರ್ತವ್ಯ ಇದು, ಪ್ರಜೆಗಳ ಕರ್ತವ್ಯ ಇದು, ಗಂಡ ಹೀಗಿರಬೇಕು, ಹೆಂಡತಿ ಹೀಗಿರಬೇಕು ಎಂಬ ಕಟ್ಟುಪಾಡುಗಳು ರೂಪುಗೊಂಡವು. ಈ ಕಟ್ಟುಪಾಡುಗಳು ಪುರುಷ ಸಂಸ್ಕೃತಿಯನ್ನು ಬೆಂಬಲಿಸುತ್ತಾ ಸಾಗಿದ್ದರಿಂದ ಮಹಿಳೆಯರನ್ನು ಕಡೆಗಣಿಸಲಾಯಿತು. ಪ್ರಾಚೀನ ನಾಗರಿಕತೆಗಳಲ್ಲಿಯೇ ಬೆಳೆದು ಬಂದ ಈ ಬಗೆಯ ಅನಿಷ್ಟ ಕಟ್ಟುಪಾಡುಗಳು ಅವೈಜ್ಞಾನಿಕ ಹಾಗೂ ಮಾನವ ಸಂಪನ್ಮೂಲದ ಸಂಪೂರ್ಣ ಸದ್ಬಳಕೆಯಿಂದ ಸಾಧಿಸಬಹುದಾಗಿದ್ದ ಅಭಿವೃದ್ಧಿಗೆ ಈಗಲೂ ಅಡ್ಡಿಗಳಾಗಿ ನಿಂತಿವೆ.

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೨೬ ರಿಂದ ೩೨, ಕರ್ತೃ: ಡಾ. ಹಾಲತಿ ಸೋಮಶೇಖರ್.

ಜಗತ್ತಿನ ಎಲ್ಲ ಪ್ರಾಚೀನ ನಾಗರಿಕತೆಗಳಲ್ಲೂ ಆರ್ಥಿಕ ಮತ್ತು ರಾಜಕೀಯ ಸಂಘರ್ಷ ಜನಾಂಗಗಳ ನಡುವೆ ನಡೆದಿರುವುದು ಕಂಡುಬರುತ್ತದೆ. ಈ ಎರಡನ್ನೂ ನಿಯಂತ್ರಿಸುವ ಕೃತಕ ವರ್ಗವನ್ನೊಳಗೊಂಡ ಧಾರ್ಮಿಕ ಸಮಾಜ ಕಾಲಾನಂತರದಲ್ಲಿ ಕಾಣಿಸಿಕೊಂಡಿದೆ. ಆ ನಾಗರಿಕ ಸಮಾಜವು ಧರ್ಮದ ನೆರಳಿನಲ್ಲಿ, ಧರ್ಮಗುರುಗಳ ನಿರ್ದೇಶನದಲ್ಲಿ ನಾಗರಿಕತೆಗಳ ನಡಿಗೆಯಿದ್ದು ಪುರೋಹಿತಶಾಹಿಯ ಪ್ರಾಬಲ್ಯವೇ ಕಂಡುಬರುತ್ತದೆ. ಪ್ರಮುಖವಾಗಿ ಮಹಿಳೆ ಎರಡನೆ ಪ್ರಜೆಯಾಗಿ ರೂಪುಗೊಂಡಿರುವ ಲಕ್ಷಣಗಳು ಈ ನಾಗರಿಕತೆಯಲ್ಲಿ ಕಂಡುಬರುವುದನ್ನು ನಾವು ಗಮನಿಸಬಹುದು.

### ೧.೪. ವೇದಗಳ ಕಾಲದಲ್ಲಿ ಮಹಿಳೆ

ಆರ್ಯಸಂಸ್ಕೃತಿ ಮತ್ತು ದ್ರಾವಿಡ ಸಂಸ್ಕೃತಿಗಳೆರಡು ಮಾನವ ಕುಲಕ್ಕೆ ಕೊಟ್ಟ ಮಹತ್ವದ ಕೊಡುಗೆಗಳೆಂದರೆ, ವೇದಗಳು. ಋಗ್ವೇದ, ಯಜುರ್ವೇದ, ಅರ್ಥರ್ವಣ ವೇದ ಮತ್ತು ಸಾಮವೇದಗಳು. ಇವುಗಳು ಒಂದೇ ಕಾಲಕ್ಕೆ ರಚಿತವಾದವುಗಳಲ್ಲ. ಅಲ್ಲದೆ ಈ ನಾಲ್ಕು ವೇದಗಳು ಧಾರ್ಮಿಕ ಗ್ರಂಥಗಳಾದರೂ ಆ ಕಾಲದ ಸಾಮಾಜಿಕ ಜೀವನದ ಮೇಲೆ ಬೆಳಕು ಚೆಲ್ಲುವುದರಿಂದ ಮತ್ತು ಇತರ ವಿಷಯಗಳ ಜೊತೆಗೆ ಸ್ತ್ರೀಯರ ಸ್ಥಾನಮಾನ ಕುರಿತ ಸಾಹಿತ್ಯಿಕ ಆಧಾರಗಳು ಇಲ್ಲಿ ದೊರೆಯುವುದರಿಂದ ವೇದಗಳ ಕಾಲದಲ್ಲಿ ಮಹಿಳೆಯರ ಸಾಮಾಜಿಕ ಸ್ಥಿತಿಗತಿಗಳನ್ನು ಅರಿಯಲು ಸಹಾಯಕವಾಗಿವೆ. ವೇದಗಳ ಆರಂಭದ ಕಾಲದಲ್ಲಿನ ಮಹಿಳೆಯ ಜೀವನ ಸ್ಥಿತಿ ಉತ್ತಮವಾಗಿರುವುದು ಕಂಡುಬರುತ್ತದೆ. ಋಗ್ವೇದ ಕಾಲದ ನಾರಿ, ಶಕ್ತಿ ಮತ್ತು ಔದಾರ್ಯದ ಪ್ರತೀಕವಾಗಿದ್ದಾಳೆ. ಆಗಿನ ಜನ ಮಾನಸದಲ್ಲಿ ಸ್ತ್ರೀಯರ ಬಗ್ಗೆ ಅತ್ಯುತ್ತಮ ಭಾವನೆಗಳಿರುವ ಜೊತೆಗೆ ಸಮಾನ ಭಾವದಿಂದ ಕಾಣುವ ಪ್ರವೃತ್ತಿಯನ್ನು ಕಾಣುತ್ತೇವೆ.

ಸ್ತ್ರೀ-ಪುರುಷರ ಸಂಬಂಧಗಳ ಮೇಲೆ ವೇದಗಳ ಕಾಲದಲ್ಲಿ ವಿಪರೀತ ಕಟ್ಟುಪಾಡುಗಳಿರಲಿಲ್ಲ. ಬಾಲ್ಯವಿವಾಹವೂ ರೂಢಿಯಲ್ಲಿರಲಿಲ್ಲ. ವಿವಾಹಕ್ಕೆ ಮುನ್ನ ಮಗಳು ಋತುಮತಿಯಾದರೆ ಅವಳ ತಾಯಿ-ತಂದೆಯರು ನರಕಕ್ಕೆ ಹೋಗುವರೆಂಬ ನಂಬಿಕೆಗಳಿರಲಿಲ್ಲ. ಮಹಿಳೆಯರೆಲ್ಲ ವಿವಾಹವಾಗಲೇಬೇಕೆಂಬ ಕಟ್ಟಳೆಗಳಿರಲಿಲ್ಲ. ಒಂದು ವೇಳೆ ವಿವಾಹವಾಗದೇ ಉಳಿದರೆ ಹುಟ್ಟಿದ ಮನೆಯಲ್ಲಿಯೇ ಯಾವ ಸಾರ್ವಜನಿಕ ಖಂಡನೆಯಿಲ್ಲದೆ ಸುಖವಾಗಿರಬಹುದಿತ್ತು. ಯಾವುದೇ ಮಹಿಳೆಯನ್ನು ಮದುವೆಯಾದ ಪುರುಷ ಒಂದು ವೇಳೆ ಯುದ್ಧ, ಬೇಟೆ, ಕಾಯಿಲೆ ಇಲ್ಲವೇ

ಸ್ವಾಭಾವಿಕವಾಗಿಯೇ ಸಾವನ್ನಪ್ಪಿದರೆ ಆತನ ಅಣ್ಣಂದಿರಾಗಲಿ ಅಥವಾ ತಮ್ಮಂದಿರಾಗಲಿ ಆಕೆಯನ್ನು ವಿವಾಹವಾಗಬಹುದಿತ್ತು. ಸತ್ತು ಹೋದ ಗಂಡನನ್ನು ನೆನೆದು ಪ್ರಲಾಪಿಸುತ್ತಿರುವ ವಿಧವೆಯನ್ನು ಸತ್ತವನ ತಮ್ಮ ಸಮಾಧಾನ ಹೇಳಿ ಸತ್ತವನನ್ನು ಮರೆತು ಯಥಾಪ್ರಕಾರ ಜೀವನ ಸಾಗಿಸಬೇಕೆಂದು ಉಪದೇಶ ಮಾಡಿ ತನ್ನ ಮನೆಗೆ ಕರೆದೊಯ್ಯುವುದು ಋಗ್ವೇದದಲ್ಲಿ ಬರುತ್ತದೆ. ವಿವಾಹವಾದ ನಾಲ್ಕು ದಿನದಲ್ಲಿಯೇ ನವದಂಪತಿಗಳು ಸಮಾಗಮಗೊಳ್ಳುತ್ತಿದ್ದರು ಎಂಬ ಉಲ್ಲೇಖವಿರುವುದರಿಂದ ಬಾಲ್ಯವಿವಾಹ ಪದ್ಧತಿ ಇರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಯುವಕ-ಯುವತಿಯರೇ ಆಗಿನ ಕಾಲದಲ್ಲಿ ವಿವಾಹವಾಗುತ್ತಿದ್ದರು ಎಂಬುದು ತಿಳಿದುಬರುತ್ತದೆ.

ಋಗ್ವೇದದಲ್ಲಿದ್ದ ಮಹಿಳೆ ಪುರುಷನಂತೆಯೇ ಕೌಟುಂಬಿಕ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಾಳೆ. ಮೊಗದೆರೆಯನ್ನು ಬಳಸದೆಯೇ ಅವಳು ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುತ್ತಾಳೆ. ಯುದ್ಧರಂಗದಲ್ಲಿಯೂ ತನ್ನ ಶಕ್ತಿ ಸಾಮರ್ಥ್ಯಗಳನ್ನು ಪ್ರದರ್ಶಿಸುತ್ತಾಳೆ. ಪುರುಷ ಋಷಿಗಳಂತೆಯೇ ಅನೇಕ ಮಹಿಳೆಯರು ತಪೋನುಷ್ಠಾನಗಳನ್ನು ಕೈಗೊಳ್ಳುತ್ತಾರೆ. ಆಗಿನ ಮಹಿಳೆಯರು ಋಷಿಗಳು, ಕವಿಗಳು, ಋಗ್ವೇದಸೂತ್ರಗಳ ಕರ್ತೃಗಳೂ ಆಗಿರುವುದನ್ನು ಕಾಣುತ್ತೇವೆ. ಪುರುಷ ಋಷಿಗಳ ಮಂತ್ರಗಳ ವಿಷಯದಲ್ಲಿ ತೋರುವ ಶ್ರದ್ಧೆ-ನಿಷ್ಠೆಗಳನ್ನೇ ಋಗ್ವೇದ ಕಾಲದ ಆರ್ಯರು ಮಹಿಳಾ ಋಷಿಗಳ ಮಂತ್ರಗಳ ವಿಷಯದಲ್ಲೂ ತೋರುತ್ತಿದ್ದುದಾಗಿ ತಿಳಿದುಬರುತ್ತದೆ.

ಋಗ್ವೇದ ಕಾಲದಲ್ಲಿ ಸಹಗಮನ ಪದ್ಧತಿ ಆಚರಣೆಯಲ್ಲಿರಲಿಲ್ಲ. ಆರ್ಯರಿಗೆ ಅಂದು ಜನಬಲದ ಅಗತ್ಯವಿತ್ತು. ಹತ್ತು ಮಕ್ಕಳ ತಂದೆತಾಯಿಯರಾಗುವುದೇ ಆದರ್ಶವಾಗಿತ್ತು. ಆದ್ದರಿಂದ ಮಹಿಳೆಯರ ಸಂಖ್ಯೆಯನ್ನು ಕಡಿಮೆ ಮಾಡುವ ಯಾವುದೇ ಪದ್ಧತಿಯನ್ನು ಆಚರಿಸುತ್ತಿರಲಿಲ್ಲ. ಗಂಡ ತೀರಿಕೊಂಡಾಗ ಅವನ ಹೆಂಡತಿಯನ್ನು ಶವದೊಂದಿಗೆ ಚಿಂಕಿಯನ್ನಿಡುವುದಕ್ಕೆ ಮುನ್ನ ಮಲಗಿಸಿ ಅನಂತರ ಅಲ್ಲಿಂದ ಇಳಿದು ಬಂದು ತನ್ನ ಗಂಡನ ಕೈಯಿಂದ ಬಿಲ್ಲನ್ನು ಸ್ವೀಕರಿಸಿದ್ದ ಮೈದುನನನ್ನು ವರಿಸುವಳು ಎಂಬ ವಿಶೇಷಣವನ್ನು ನೀಡಲಾಗುತ್ತಿತ್ತು. ಆದ್ದರಿಂದ ವಿಧವೆಯ ಬಾಳು ನರಕವಾಗಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಋಗ್ವೇದ ಕಾಲದ ತರುವಾಯ ಉತ್ತರ ವೈದಿಕ ಕಾಲ ಆರಂಭವಾಯಿತು. ಆ ಅವಧಿಯಲ್ಲಿ ಇತರ ವೇದಗಳು, ಬ್ರಾಹ್ಮಣಗಳು, ಅರಣ್ಯಕಗಳು, ಉಪನಿಷತ್ತುಗಳು

ಮುಂತಾದವು ರಚಿತವಾದವು. ಆವರೆಗೆ ಆರ್ಯರು ಆರ್ಯೇತರರೊಂದಿಗೆ ಯುದ್ಧ ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಅಂತರ್ಯುದ್ಧದಲ್ಲಿ ತೊಡಗಿದರು. ಅಂದರೆ ಇದು ವರ್ಣ-ವರ್ಗಗಳ ಹೋರಾಟವಾಗಿತ್ತು. ಆ ಸಂದರ್ಭದಲ್ಲಿ ಸ್ತ್ರೀ-ಪುರುಷನ ನಡುವಿನ ಸಂಬಂಧದಲ್ಲಿ ದೊಡ್ಡ ಗೋಡೆ ನಿರ್ಮಾಣವಾಯಿತು. ಆಗ ನಿರ್ಮಿತಿಗೊಂಡ ಅಸಮಾನತೆಯ ಗೋಡೆಯನ್ನು ಇಂದಿಗೂ ಉರುಳಿಸುವುದು ಸಾಧ್ಯವಾಗಿಲ್ಲ.

ವೇದಗಳ ಕಾಲದಲ್ಲಿಯೇ ಆಚರಣೆಗೆ ಬಂದ ಬಹುಪತ್ನಿತ್ವ ಪದ್ಧತಿ ಮಹಿಳೆಯರ ಹೀನಸ್ಥಿತಿಗೆ ಕಾರಣವಾಯಿತು. ಋಗ್ವೇದೋತ್ತರ ಕಾಲದಲ್ಲಿದ್ದ ಪುರುಷ ಮಹಿಳೆಯರನ್ನು ತನ್ನ ತೊತ್ತೆಂದು ಕಾಣಲಾರಂಭಿಸಿದ. ಮಹಿಳೆಯರು ತನ್ನ ದೈಹಿಕ ಸುಖಕ್ಕೆ ಮಾತ್ರ ಇರುವುದು ಎಂದು ಪುರುಷ ಭಾವಿಸಿದ. ಅಲ್ಲದೆ ಅದು ಆ ಕಾಲದ ಮೌಲ್ಯವೆನಿಸಿತು. ದೇಹಸುಖ ಮತ್ತು ಸಂಪತ್ತಿನ ವರ್ಧನೆ ಎರಡೂ ಮದುವೆಯಾಗು- ವುದರಿಂದ ದೊರೆಯಲಾರಂಭಿಸಿತು. ವಧುವಿನ ತಾಯಿ-ತಂದೆಯರು ತನ್ನ ಅಳಿಯನ ಮನೆಗೆ ಮದುವೆಯ ಸಂದರ್ಭದಲ್ಲಿ ಭೂಮಿ, ಚಿನ್ನ, ಧನ-ಕನಕಗಳು, ವಸ್ತ್ರ ಒಡವೆ-ವಸ್ತುಗಳು, ಪಶು-ಆನೆ-ಕುದುರೆ-ಕಾಲಾಳುಗಳು-ದಾಸ-ದಾಸಿಯರನ್ನು ವಧುವಿನೊಂದಿಗೆ ಕಳುಹಿಸಿ-ಕೊಡು-ತ್ತಿದ್ದರಿಂದ ಸ್ವಾಭಾವಿಕವಾಗಿಯೇ ಸಂಪತ್ತು ವರ್ಧಿಸುತ್ತಿತ್ತು. ಸೋಮಾರಿ ಪುರುಷ ಅನೇಕ ಹೆಂಡತಿಯರನ್ನು ಪಡೆಯುವ ಮೂಲಕವೇ ಧನಿಕನಾಗುತ್ತಿದ್ದ. ಇದು ಒಬ್ಬ ಪುರುಷ ಅನೇಕ ಹೆಂಡತಿಯರನ್ನು ಪಡೆಯಲು ಮೂಲವಾಯಿತು. ಕುಟುಂಬವು ದೊಡ್ಡದಿದ್ದಷ್ಟೂ ಹೆಮ್ಮೆಪಡುವ ಪರಿಪಾಟ ಬೆಳೆಯಿತು; ಜನರು ಹೆಚ್ಚಿದಷ್ಟೂ ಪುರುಷನ ವರ್ಚಸ್ಸೂ ಹೆಚ್ಚುತ್ತಿತ್ತು. ಹೆಚ್ಚು ಹೆಂಡತಿಯರಿದ್ದರೆ ಹೆಚ್ಚು ಮಕ್ಕಳು, ತಿನ್ನುವ ಬಾಯಿಗಳು, ದುಡಿಯುವ ಕೈಗಳು ಹೆಚ್ಚುತ್ತಿದ್ದವು. ಸಂಪತ್ತು, ಭೂಮಿ ಹೇರಳ-ವಾಗಿದ್ದರಿಂದ ದುಡಿಯುವವರಿಗೆ ಬೇಕಾದಷ್ಟೂ ಅವಕಾಶವೂ ಇತ್ತು.[೧]

ಋಗ್ವೇದ ಕಾಲದಲ್ಲಿಯೇ ಕೊನೆಕೊನೆಗೆ ಮಹಿಳೆಯರ ಸ್ಥಿತಿಗತಿಗಳು ಉತ್ತಮವಾಗಿರಲಿಲ್ಲ ಎಂಬ ಸಣ್ಣಸೂಚನೆ ಸಿಗುತ್ತದೆ. ಅದೆಂದರೆ ಜೂಜುಗಾರರು ತಮ್ಮ ಹೆಂಡತಿಯರನ್ನೇ ಪಣವಾಗಿ ಒಡ್ಡಿ ಜೂಜಾಡುತ್ತಿದ್ದರು ಎಂಬುದು. ಅಂಥ ಸಂದರ್ಭದಲ್ಲಿ ಸೋತವನು ತನ್ನ ಹೆಂಡತಿಯನ್ನು ಗೆದ್ದವನ ವಶಕ್ಕೆ ನೀಡಬೇಕಾಗಿತ್ತು. ಆಗ ಆಕೆ ಇತರರಿಂದ ಅಂಗೀಕೃತಳೂ, ಚುಂಬಿತಳೂ ಆಗುತ್ತಿದ್ದಳು. ಸಮಾಜದಲ್ಲಿ ಈ

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೩೬ ರಿಂದ ೪೪, ಕರ್ತೃ: ಡಾ. ಹಾಲತಿ ಸೋಮಶೇಖರ್.

ಬಗೆಯ ಸ್ತ್ರೀಯರು ಜಾರಿಣಿಯರೆನಿಸಿದರು. ಇಂಥವರನ್ನು ನರ್ತನಕ್ಕೆಳೆಯುತ್ತಿದ್ದರು. ಇದರಿಂದಾಗಿ ಗಣಿಕೆಯರ ವರ್ಗವೇ ನಿರ್ಮಾಣವಾಯಿತು. ಪುರುಷನ ಐಲಾಟಗಳ ಪರಿಣಾಮದಿಂದ ಮಹಿಳೆಯರು ಇಂಥ ಸ್ಥಿತಿಗೆ ನೂಕಲ್ಪಡುತ್ತಿದ್ದರು. ಗಣಿಕೆಯರ ನರ್ತನವಿರುತ್ತಿತ್ತು. ಅನೇಕ ಬಾರಿ ನರ್ತಿಸುವಾಗ ಇಂಥ ಮಹಿಳೆಯರು ತಮ್ಮ ಎದೆಯನ್ನು ತೆರೆದು ತೋರಿಸುತ್ತಾ ನರ್ತಿಸುತ್ತಿದ್ದರು. ಇದು ಮುಂದೆ ವೇಶ್ಯಾವೃತ್ತಿಗೆ ಅವಕಾಶ ಮಾಡಿತು. ಮಹಿಳೆಗೂ ಒಂದು ಮನಸ್ಸಿದೆ, ಬದುಕಿನಲ್ಲಿ ಅವಳದೇ ಆಯ್ಕೆಯೊಂದಿದೆ ಎಂದು ಪುರುಷ ಭಾವಿಸಲೇ ಇಲ್ಲ. ಜೂಜಿಗೆ ಪಣ ಒಡ್ಡುವಾಗ ಕನಿಷ್ಠ ಹೆಂಡತಿಯ ಒಪ್ಪಿಗೆ ಕೇಳುವಷ್ಟೂ ಸೌಜನ್ಯವೂ ಪುರುಷನಿಗಿರಲಿಲ್ಲ. ಆದರೆ ಸೂರ್ಯಸೂಕ್ತದಲ್ಲಿ ಜೂಜುಗಾರನ ಪಶ್ಚಾತ್ತಾಪ ಬರುತ್ತದೆ. "ಅವಳು ನನ್ನೊಂದಿಗೆ ಜಗಳವಾಡಲಿಲ್ಲ. ನನ್ನ ಮೇಲೆ ಕೋಪ ಮಾಡಲಿಲ್ಲ. ನನ್ನನ್ನೂ ಕಂಡರೂ, ನನ್ನ ಸ್ನೇಹಿತರನ್ನು ಕಂಡರೂ ಚೆನ್ನಾಗಿಯೇ ಇದ್ದಳು. ಜೂಜಿನಲ್ಲಿ ಸೋತು ನಾನು ನನ್ನ ಒಲಿದ ಹೆಂಡತಿಯನ್ನು ಹೊರಕ್ಕೆ ದೂಡಿದೆನಲ್ಲಾ!" ಎಂದು ಪರಿತಪಿಸುತ್ತಾನೆ. ಜೂಜುಗಾರನ ಹೆಂಡತಿ ದಿಕ್ಕಿಲ್ಲದೆ ಗೋಳಾಡುವ ಪ್ರಸಂಗ ಪ್ರಸ್ತಾಪಿತವಾಗಿದೆ.

ದಾಸಿಯರನ್ನು ದಾನಕೊಡುವ ಪದ್ಧತಿ ಇರುವುದು ವೇದಗಳ ಕಾಲದಲ್ಲಿಯೇ ಕಂಡುಬರುತ್ತದೆ. ಹೀಗೆ ದಾನ ಮಾಡುವ ಸಂದರ್ಭದಲ್ಲಿ ಪಠಿಸಬೇಕಾದ ದಾನಸ್ತುತಿಗಳು ವೇದಗಳಲ್ಲಿವೆ. ಈ ಬಗೆಯ ದಾನದಿಂದ ಅಂತಃಪುರವನ್ನು ತುಂಬುತ್ತಿದ್ದ ತರುಣಿಯರು ಹೆಚ್ಚಾಗಿ ಆರ್ಯೇತರರಾಗಿರುತ್ತಿದ್ದರು. ಅವರಲ್ಲಿ ಮುಖ್ಯವಾಗಿ ದಲಿತ ನಾರಿಯರಿರುತ್ತಿದ್ದರು. ಆ ನಾರಿಯರು ಆರ್ಯರ ಹೆಂಡತಿಯರಿಗಿಂತಲೂ ಆಕರ್ಷಕರಾಗಿದ್ದು ಆರ್ಯರು ಈ ನಾರಿಯರ ಲಾವಣ್ಯಕ್ಕೆ ಮರುಳಾಗಿ ಸೇವಿಸುತ್ತಿದ್ದರು ಎಂಬ ಮಾತನ್ನು ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆಯಲ್ಲಿ ಕಾಣಬಹುದು. ಇಂಥ ನಾರಿಯರನ್ನು ಅಗಣಿತ ಸಂಖ್ಯೆಯಲ್ಲಿ ಆರ್ಯರು ತಮ್ಮ ಹೊಲಗದ್ದೆಗಳಲ್ಲಿ ಕೆಲಸ ಮಾಡಿಸುತ್ತಿದ್ದರು. ಈ ದಾಸಿಯರನ್ನು ಮನಸಾರೆ ಭೋಗಿಸಿ ಅನಂತರದಲ್ಲಿ ಪುರೋಹಿತರಿಗೆ ದಾನ ಮಾಡುತ್ತಿದ್ದರು. ಕಾಲಾನಂತರದಲ್ಲಿ ಆ ದಾಸ ಸ್ತ್ರೀಯರಲ್ಲಿ ಆರ್ಯರಿಗೆ ಕಕ್ಷಿವಾನ, ಔಶಿಜ, ಕಣ್ವ, ವತ್ಸ ಮೊದಲಾದ ಋಷಿ ಶ್ರೇಷ್ಠರು ಹುಟ್ಟಿದರು. ಇದು ವಂಶಶುದ್ಧಿಯ ಬಗೆಗಿನ ಆರ್ಯರ ಭಾವನೆಯ ವಿಷಯದಲ್ಲಿ ಐತಿಹಾಸಿಕ ಮಾರ್ಮಿಕ ವ್ಯಂಗವೇ ಆಗಿತ್ತು ಎಂದು ಹೇಳುವುದುಂಟು ಅದೇನೆ ಇರಲಿ ವೇದಗಳ

ಕಾಲದಲ್ಲಿಯೇ, ನಾರಿಯರನ್ನು ಆರ್ಯರು ತೊತ್ತಿನ ಆಳುಗಳಾಗಿ, ಭೋಗದ ವಸ್ತುಗಳಾಗಿ ಕಂಡಿರುವುದು ಸ್ಪಷ್ಟವಿದೆ.

ಋಗ್ವೇದ ಕಾಲದಲ್ಲಿ ಋತುಮತಿಯಾಗುವುದಕ್ಕೆ ಮುನ್ನ ಹೆಣ್ಣಿನ ವಿವಾಹ ಮಾಡುತ್ತಿರಲಿಲ್ಲ. ರಜಸ್ವಲೆಯಾದ ಮೇಲೆ ಮೂವತ್ತಾರು ಋತುಸ್ರಾವಗಳನ್ನು ಕಂಡ ಬಳಿಕ ಅಂದರೆ ಸುಮಾರು ಹದಿನಾರು ವರ್ಷ ವಯಸ್ಸಿನ ಮಹಿಳೆಗೆ ಮದುವೆ ಮಾಡುತ್ತಿದ್ದರು. ಎಂಟೇ ವರ್ಷಕ್ಕೆ ಮದುವೆ ಮಾಡತೊಡಗಿದರು. ವೇದ ಕಾಲಾನಂತರದಲ್ಲಿ ರಜಸ್ವಲೆಯಾಗುವವರೆಗೂ ತನ್ನ ಮಗಳಿಗೆ ಮದುವೆ ಮಾಡದೆ ಇರುವಂಥ ತಂದೆಗೆ ನರಕಭಾಜನನಾಗುವ ಭಯವನ್ನು ತೋರಲಾಯಿತು. ಇದರಿಂದಾಗಿ ಬಾಲ್ಯವಿವಾಹದಂಥ ಹೀನ ಕೃತ್ಯಗಳು ಆರಂಭವಾದವು. ಕೆಲವು ಸಮುದಾಯಗಳಲ್ಲಿ ಹಾಲುಗಲ್ಲದ ಮಕ್ಕಳ ಕೈಯಿಂದ ಮಂಗಳಸೂತ್ರವನ್ನು ಕಟ್ಟಿಸಲಾಯಿತು. ಇಂಥ ಹೀನಪದ್ಧತಿ ಸಾಲದೆಂಬಂತೆ 'ಸಹಗಮನ' ಪದ್ಧತಿಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಲಾಯಿತು.

ಒಟ್ಟಾರೆ ವೇದಗಳ ಆರಂಭದಲ್ಲಿ ಮಹಿಳೆಯರಿಗಿದ್ದ ಆದ್ಯತೆಗಳು ಕ್ರಮೇಣ ಕಮ್ಮಿಯಾಗಿವೆ. ವೇದಾಧ್ಯಯದಂಥ ಗಂಭೀರ ವಿಷಯಗಳನ್ನು ಅಧ್ಯಯನ ಮಾಡಲು ಮಹಿಳೆಯರು ಯೋಗ್ಯರಲ್ಲ ಎಂಬ ತೀರ್ಮಾನಕ್ಕೆ ಬಂದಂತಿದೆ. ಉಪನಯನ, ಬ್ರಹ್ಮಚರ್ಯಗಳು ಮಹಿಳೆಯರಿಗೆ ಇದ್ದಾಗ್ಯೂ ಪುರುಷ ಶ್ರೇಷ್ಠತೆಯೇ ಪ್ರಾಬಲ್ಯ ಪಡೆದಂತಿದೆ. ಬ್ರಹ್ಮವಾದಿನಿಯರ ಸ್ಥಾನವನ್ನು 'ಸದ್ಯೋವಧುಗಳು' ಅಂದರೆ ಸಂಸಾರವಂದಿಗರಾದವರು ಪಡೆಯುವುದು ಹೆಚ್ಚಾದ ಹಾಗೆ ಪುರುಷನಿಗೆ ಸರಿಸಮರಾಗಿದ್ದ ಮಹಿಳೆಯರ ಸಂಖ್ಯೆ ಕ್ಷೀಣಿಸತೊಡಗಿದೆ. ಕ್ರಮೇಣ ವಿದ್ಯೆ ಕೂಡ ಮಹಿಳೆಯರಿಗೆ ಸಿಗದಂತಾಗಿದೆ. ಆಧ್ಯಾತ್ಮಿಕ ವಿದ್ಯೆಯಿಂದ ಮಹಿಳೆಯರನ್ನು ಹೊರಗಿಟ್ಟು ಗೃಹಜೀವನಕ್ಕೆ ಬೇಕಾದ ವಿದ್ಯೆ ನೀಡುವ ಪರಿಪಾಠ ಬೆಳೆಯಲಾರಂಭಿಸಿದ ಮೇಲೆ ಹೆಣ್ಣನ್ನು ಒಬ್ಬ ಆದರ್ಶಸತಿಯಾಗಿ ಗಂಡನ ಸೇವಕಳಾಗಿ ರೂಪಿಸುವ ತರಬೇತಿ ನೀಡುವುದೇ ಪ್ರಧಾನವಾಗಿದೆ. ಮೊದಲಿಗೆ ವೇದಾಧ್ಯಯನಕ್ಕೆ ಮಹಿಳೆಗೆ ನಿಷೇಧ ಹೇರಿ ಅನಂತರದಲ್ಲಿ ವ್ಯಾಕರಣ, ಮೀಮಾಂಸೆ, ಶಿಕ್ಷಾ, ತರ್ಕ, ನಿರುಕ್ತ, ಛಂದಸ್ ಮತ್ತು ಜ್ಯೋತಿಷ್ಯಾಧ್ಯಯನವನ್ನೂ ಮಹಿಳೆಯರಿಗೆ ನಿರಾಕರಿಸಲಾಗಿದೆ. ಆದ್ದರಿಂದ ಸ್ತ್ರೀಯರ ವಿಷಯದಲ್ಲಿ ವೇದಗಳ ಆರಂಭ ಕಾಲಕ್ಕೆ ಕಾಣುವ ಮಹತ್ವ ವೇದೋತ್ತರ ಕಾಲಕ್ಕೆ ಕಂಡುಬರುವುದಿಲ್ಲ. ಇದರಿಂದ ಮಹಿಳೆ ಆ ಕಾಲದಿಂದಲೇ ಕತ್ತಲೆಗೆ ನೂಕಲ್ಪಟ್ಟಿದ್ದಾಳೆ.

## ೧.೫. 'ಕವಲು' ಕಾದಂಬರಿಯಲ್ಲಿನ ಪಾಶ್ಚಾತ್ಯ ಮಹಿಳೆಯ ಚಿತ್ರಣ

ಕಳೆದ ಶತಮಾನದ ಅರವತ್ತರ ದಶಕದಲ್ಲಿ ಜಾಗತಿಕ ಮಟ್ಟದಲ್ಲಿ ಹುಟ್ಟಿದ ಮಹಿಳಾ ಚಳವಳಿಗಳಿಗೂ ಸಹ ಚಾರಿತ್ರಿಕ ಒತ್ತಡದ ಕಾರಣದಿಂದಲೇ ಉದ್ಭವಿಸಿದವು. ವೇದಗಳ ಕಾಲದಿಂದೀಚೆಗೆ ಸುಮಾರು ಎರಡು ಸಾವಿರ ವರ್ಷಗಳಿಂದ ಮಹಿಳೆ ಪುರುಷನಿಗಿಂತ ಕೀಳು, ಪುರುಷನ ಅಧೀನ ಎಂಬ ಅಭಿಪ್ರಾಯಗಳು ಸ್ಥಾಪನೆಗೊಂಡವು; ಸಾಮಾಜಿಕ ಸ್ಥಾನಮಾನದಲ್ಲಿ ಮಹಿಳೆ ಎರಡನೆಯವಳಾದಳು; ಆಕೆಯೊಂದು ವಸ್ತು ಎಂಬಂತೆ ಪರಿಗಣಿಸಲ್ಪಟ್ಟಳು. ಮಹಿಳೆಯರನ್ನು ನಿರ್ದಯವಾಗಿ, ಅಮಾನವೀಯವಾಗಿ ದಂಡಿಸುವ, ಶಿಕ್ಷಿಸುವ, ಸಾಯಿಸುವ ಪುರುಷ ಪ್ರಧಾನ ಸಮಾಜ ರೂಪುಗೊಂಡಿತು. ಮಹಿಳೆಯರನ್ನು ವಿನಾಕಾರಣ ಹಿಂಸಿಸುವ ರೀತಿನೀತಿಗಳನ್ನು ಹೇಳುವಂತಹ ಸ್ಮೃತಿಗಳು ರಚನೆಗೊಂಡವು. ಪುರುಷ ಪ್ರಧಾನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಈ ಬಗೆಯ ಸ್ಮೃತಿಗಳು ಮಹಿಳೆಯನ್ನು ಅಧೀನದಲ್ಲಿಟ್ಟುಕೊಳ್ಳುವ ವಿಧಾನಗಳನ್ನೇ ಗಟ್ಟಿಗೊಳಿಸಿದವು. ಕೆಲವು ಅಮಾನವೀಯ ಆಚರಣೆಗಳ ವಿರುದ್ಧ ಪ್ರತಿಭಟಿಸಲು ಮತ್ತು ಪುರುಷರಿಗೆ ಸರಿಸಮನಾಗಿ ಮಹಿಳೆಯರು ಬದುಕುವ ಹಕ್ಕನ್ನು ಸ್ಥಾಪಿಸಲು ಮಹಿಳಾ ಚಳವಳಿಗಳು ಹುಟ್ಟಿದವು.

ಸ್ತ್ರೀ ವಿಮೋಚನೆ ಎಂಬುದು ಸಂಪೂರ್ಣ ಅಜ್ಞಾತ ವಿಷಯವಲ್ಲ. ಲೇಖಕರ ಗಮನ ಸೆಳೆದ ವಿಷಯ ವಿಮೋಚನೆ ಮತ್ತು ಲೈಂಗಿಕ ಸ್ವಾತಂತ್ರ್ಯ. ಬಗ್ಗಿ ತಗ್ಗಿ ಪುರುಷ ಪ್ರಧಾನ ಸಮಾಜವು ನಿರ್ಮಿಸಿರುವ ದಬ್ಬಾಳಿಕೆಗೆ ತಲೆಯೊಡ್ಡಿ ನಡೆದರೆ ಮಾತ್ರ ಮಹಿಳೆಗೆ ಲೈಂಗಿಕ ಅನುಭವದ ಅವಕಾಶವುಂಟು. ಇಲ್ಲದಿದ್ದರೆ ಅವಳನ್ನು ಅದರಿಂದ ವಂಚಿಸುವ ಕಟ್ಟುಕಟ್ಟಳೆ ಮತ್ತು ನೀತಿಸಂಹಿತೆಗಳನ್ನು ನಾಗರಿಕವೆಂದು ಕರೆದುಕೊಳ್ಳುವ ಎಲ್ಲ ಸಮಾಜವೂ ಇತಿಹಾಸ ಕಾಲದಿಂದ ರೂಪಿಸಿ ಹೇರಿವೆ. ತನಗೆ ಇಷ್ಟ ಬಂದಾಗ, ಇಷ್ಟ ಬಂದ ಪುರುಷನನ್ನು ಸಮೀಪಿಸಿ ಆಹ್ವಾನಿಸುವ, ಪ್ರಚೋದಿಸುವ ಹಕ್ಕು ಮಹಿಳೆಗೆ ಯಾಕೆ ಇರಬಾರದು? ಅಂಥ ವರ್ತನೆಯನ್ನು ಹೀಗಳೆಯುವುದು, ಕುಚೋದ್ಯ ಮಾಡುವುದು ಅನಾಗರಿಕತೆ, ಕೀಳು ಸಂಸ್ಕೃತಿ ಎಂಬುದನ್ನು ಇಡೀ ಸಮಾಜಕ್ಕೆ ಮನದಟ್ಟು ಮಾಡಬೇಕು. ಹದಿನಾರು ವರ್ಷ ದಾಟಿದ ಯಾವ ಗಂಡು ಹೆಣ್ಣಾದರೂ ಪರಸ್ಪರ ಲೈಂಗಿಕ ಕ್ರಿಯೆಗೆ ಆಹ್ವಾನಿಸುವ ಮುಕ್ತತೆ ಸಮಾಜದಲ್ಲಿರಬೇಕು. ಇಂತ ಮುಕ್ತತೆಯ ಅಭಾವವೇ ಸಮಾಜವನ್ನು ಬಾಧಿಸುವ ಹಿಂಸೆ, ಕ್ರೌರ್ಯ, ಅತ್ಯಾಚಾರ ಮತ್ತು ಲೈಂಗಿಕ ಶೋಷಣೆಯ ಮೂಲ ಕಾರಣ ಎಂಬುದನ್ನು ಮನೋವಿಜ್ಞಾನಿಗಳು ಸ್ಪಷ್ಟವಾಗಿ ಕಂಡುಕೊಳ್ಳುತ್ತಿದ್ದಾರೆ.

ಮಹಿಳೆಯಾದವಳು ತನ್ನ ಸಾಮರ್ಥ್ಯ ಮತ್ತು ಕರ್ತವ್ಯ ಕುಶಲತೆಗಳಿಂದ ಮೆಚ್ಚುಗೆ ಪಡೆದವಳು ಪ್ರೇಮಕ್ಕೆ ಕಣ್ಣಿಲ್ಲವೆನ್ನುತ್ತಾರೆ. ಕಾಮಕ್ಕೆ ಕಣ್ಣಿಲ್ಲವೆನ್ನುವುದು ಹೆಚ್ಚು ಅರ್ಥವುಳ್ಳ ಮಾತು. ಗಂಡು-ಹೆಣ್ಣು ಕೂಡುವಾಗ, ಅದೂ ಮೊದಲ ಸಲ ಒಂದುಗೂಡುವಾಗ ಸಹಜವಾಗಿ ಉಕ್ಕುವ ನಲ್ವಾತುಗಳು ಕೆಲವೊಮ್ಮೆ ಕೆಲವರಲ್ಲಿ ಮೂಡದಿರಬಹುದು. ಕಾಮೋದ್ರಿಕ್ತನಾದವನಿಗೆ ಎಲ್ಲವೂ ತನ್ನ ಮನಸ್ಥಿತಿಗೆ ಅನುಗುಣವಾಗಿಯೇ ಕಾಣಿಸುತ್ತದೆ. ಕಾಮಕ್ರಿಯೆಯ ಅಂಗವಾಗಿ ಮೂಡುವ ಪ್ರೀತಿಯ ಮಾತುಗಳು, ಕಾವ್ಯಮಯ ಶಬ್ಧಗಳು ಹೊರಹೊಮ್ಮುವುದುಂಟು. ವಯಸ್ಕ ಗಂಡು-ಹೆಣ್ಣುಗಳು ಪರಸ್ಪರ ಇಚ್ಛೆ ಮತ್ತು ಸಮ್ಮತಿಗಳಿಂದ ದೈಹಿಕವಾಗಿ ಒಂದುಗೂಡುವುದರಲ್ಲಿ ಯಾವ ತಪ್ಪನ್ನೂ ಎಣಿಸಬಾರದು. ಕನ್ಯತ್ವವು ಮಹಿಳೆಯ ಶೀಲದ ಅತಿಮುಖ್ಯ ಅಂಶ; ಅದನ್ನು ಜತನದಿಂದ ರಕ್ಷಿಸಿಕೊಂಡು ಶಾಸ್ತ್ರೋಕ್ತವಾಗಿ ವಿವಾಹವಾದ ಗಂಡನಿಗೆ ಒಪ್ಪಿಸಿಕೊಳ್ಳುವುದು ಅವಳ ಧರ್ಮದ ಅತಿ ಮುಖ್ಯಭಾಗ.

ಮಹಿಳೆಯಾದವಳು ತನ್ನ ಗಂಡನನ್ನು ಮೀರಿ ದೇಹಸುಖವನ್ನು ಕಲ್ಪಿಸಿಕೊಳ್ಳುವುದು ಪರಮ ಪಾಪ ಎಂಬಂತಹ ಪರಿಕಲ್ಪನೆಗಳನ್ನು ಬೇರುಸಹಿತ ಕಿತ್ತೊಗೆಯದೆ ಹೆಂಗಸಿಗೆ ವಿಮೋಚನೆ ಸಾಧ್ಯವಿಲ್ಲ. ಇದು ವಿಮೋಚನಾ ಚಳವಳಿಯ ಪ್ರಮುಖ ಅಂಶವಾಗಿರುತ್ತದೆ. ವಯಸ್ಕರಾದ ಗಂಡು-ಹೆಣ್ಣುಗಳು ಪರಸ್ಪರ ಸಮ್ಮತಿಯಿಂದ ಮದುವೆಯ ಯಾವ ಬಂಧನವಾಗಲಿ ನಿರೀಕ್ಷೆಯಾಗಲಿ ಇಲ್ಲದೆ ಕೂಡುವ ಸ್ವಾತಂತ್ರ್ಯವಿದೆ. ಯಾವ ವಿವಾದದಲ್ಲೂ ನ್ಯಾಯಾಲಯವು ಹೆಂಗಸಿನ ಮಾತನ್ನು ನಂಬುತ್ತದೆಯೇ ಹೊರತು ಗಂಡಸಿನ ಮಾತಿಗೆ ಬೆಲೆ ಕೊಡುವುದಿಲ್ಲ. ಹೆಂಗಸು ಗರ್ಭಿಣಿಯಾಗಿರುವಾಗ, ಮದುವೆಯಾಗ್ತೀನಿ ಅಂತ ನಂಬಿಸಿ ಇವನು ಗರ್ಭಿಣಿ ಮಾಡಿದ ಅಂತ ಅವಳು ಹೇಳಿದರೆ ಕೋರ್ಟು ಅದನ್ನು ಅತ್ಯಾಚಾರಕ್ಕೆ ಸಮ ಅಂತ ಪರಿಗಣಿಸಿ ಏಳುವರ್ಷ ಸಜಾ ಹಾಕಬಹುದು.

ಇನ್ನು ಮಹಿಳೆಯ ಗುಲಾಮಗಿರಿಯನ್ನು ತಿರಸ್ಕರಿಸುವ, ಕುಂಕುಮ ತುರುಬಿನ ಹೂವುಗಳ ದಾಸ್ಯದ ಸಂಕೇತಗಳನ್ನು ಹೇರುವ ಪ್ರಯತ್ನ ಕಂಡುಬರುವುದುಂಟು. ಸ್ತ್ರೀಯಾದವಳು ಈ ಸಂಕೇತಗಳನ್ನು ಪಾಲಿಸದಿದ್ದರೆ ದೇಹಸುಖವನ್ನು ನಿರಾಕರಿಸಿಕೊಳ್ಳುತ್ತಾಳೆ. ದಾಂಪತ್ಯದಲ್ಲಿ ದೇಹಸುಖವು ಪರಸ್ಪರರ ಹಕ್ಕು. ಗಂಡಸಿನ ಹಾಗೆ ಹೆಣ್ಣಾದವಳು ಕೂಡ ನಡಕೊಬೇಕು. ಒಂದೇ ಜಾತಿಯ ಒಂದು ಗಂಡು ಒಂದು ಹೆಣ್ಣು ಪ್ರಾಣಿಯನ್ನು ಒಂದು ದೊಡ್ಡ ಬೋನಿನೊಳಗೆ ಕೂಡಿಹಾಕಿದರೆ ಅವುಗಳ ನಡುವೆ ಸಿಗಿದು ಹಾಕುವಂಥ ದ್ವೇಷವಿದ್ದರೂ ಶಾರೀರಕ ಶಮನಕ್ಕೆ ಬೇರೆ ದಾರಿ ಇಲ್ಲದೆ

ಒಂದುಗೂಡುತ್ತವೆ, ಕೂಡಲೇಬೇಕು. ಇಂಥ ಪರಿಸ್ಥಿತಿಗೆ ಮಾನವ ಸಮಾಜದಲ್ಲಿ ವಿವಾಹ, ವಿವಾಹಬಂಧನ ಅನ್ನುತ್ತಾರಲ್ಲವೆ? ಎಂಬ ಉಪಮೆ ಹೊಳೆಯುವುದನ್ನು ನಾವು ಕಾಣಬಹುದು.

ಇತಿಹಾಸದ ಆರಂಭಕಾಲದಿಂದಲೂ ಹೆಂಗಸನ್ನು ತುಳಿದು ಗುಹೆಯ, ಗುಡಿಸಿಲಿನ ಮನೆಯ ಗೋಡೆಗಳ ನಡುವೆ ಬಂಧಿಯಾಗಿರಿಸಿ ಅಡುಗೆ, ಹೆರಿಗೆ, ಮೊಲೆಯೂಡಿಕೆಗಳ ಕಠಿಣ ದುಡಿಮೆಗೆ ಕಟ್ಟಿಹಾಕಿರುವ ಸಂಗತಿಯನ್ನು ಇಲ್ಲಿ ವಿವರಿಸಬಹುದು. ಈ ಮಹಿಳೆಯಾದವಳು ಸಾಮಾಜಿಕ, ಶೈಕ್ಷಣಿಕ ವಾತಾವರಣ ಸಂಪ್ರದಾಯದೊಳಗೇ ಬದುಕುವಂತಹ ಸ್ಥಿತಿಯಲ್ಲಿ ಇಲ್ಲ. ಒಬ್ಬರಿಗೆ ಇಬ್ಬರು ಇನ್ನೊಬ್ಬರಿಗೆ ಮೂರು ಮಕ್ಕಳಿದ್ದ ಹೆಂಗಸರು ಶೈಕ್ಷಣಿಕ ಮಟ್ಟದಲ್ಲಿ ಏನೇ ಹೇಳಲಿ ಕುಟುಂಬದ ರಚನೆ ಮತ್ತು ಬೇರುಗಳನ್ನು ಅಲುಗಾಡಿಸುವ ಆಲೋಚನೆಗೆ ಅವರು ಇಳಿಯುತ್ತಿರಲಿಲ್ಲ. ಆದ್ದರಿಂದ ಹೆಂಸರ ಆಲೋಚನೆಯು ಹೆಚ್ಚು ತೀವ್ರವಾಗಿರಲೇ ಇಲ್ಲ. ಎಷ್ಟಾದರೂ ಹೆಂಗಸು ಹೊಂದಿಕೊಂಡು ಹೋಗಬೇಕು. ಹೊಂದಿಕೊಂಡು ಹೋಗುವ ಶಕ್ತಿ ಇರುವುದರಿಂದಲೇ ಅವಳು ಗಂಡಸಿಗಿಂತ ದೈಹಿಕವಾಗಿ, ಮಾನಸಿಕವಾಗಿ, ನೈತಿಕವಾಗಿ ಹೆಚ್ಚು ಶಕ್ತಿವಂತಳು ಎಂಬುದನ್ನು ಇದು ಎತ್ತಿತೋರಿಸುತ್ತದೆ.

ಈ ಕಾದಂಬರಿಯಲ್ಲಿ ಗಮನಿಸಬೇಕಾದ ಪ್ರಮುಖ ಅಂಶವೆಂದರೆ ಹದಿನಾರು ಎನ್ನುವುದು ವೈದ್ಯಶಾಸ್ತ್ರ, ಮನಶ್ಯಾಸ್ತ್ರ, ಸಮಾಜಶಾಸ್ತ್ರ ಮೊದಲಾದ ಎಲ್ಲ ವೈಜ್ಞಾನಿಕ ಮಾನಗಳಿಂದಲೂ ಅಳೆದು ನಿರ್ಧರಿಸಿ ಮಾಡಿರುವ ನ್ಯಾಯದ ನಿಯಮ. ಹದಿನಾರು ತುಂಬಿದವರು ದೇಹಸಂಪರ್ಕಕ್ಕೆ ಅರ್ಹರು ನಿಜ. ಎಷ್ಟೋ ಹುಡುಗ ಹುಡುಗಿಯರು ಅದಕ್ಕೆ ಮೊದಲೇ ಮುಂದುವರೆದು ಅವಿವೇಕ ಮಾಡಿಕೊಳ್ಳುವುದೂ ಉಂಟು. ಆದರೆ ಅದು ಅಪರಾಧವಲ್ಲ. ಶಿಕ್ಷಾರ್ಹವಲ್ಲ, ದೇಹಸಂಪರ್ಕ ಮಾಡುವವರು ತಪ್ಪದೇ ಕಾಂಡೋಮ್ ಬಳಸಿ ಅಂತ ತಲೆಗೆ ನಾಟಿಸಿರ್ತಾರೆ. ಅದು ಸುಲಭವಾಗಿ ಸಿಕ್ಕುವ ಏರ್ಪಾಡು ಮಾಡಿರ್ತಾರೆ. ಅಕಸ್ಮಾತ್ ಹುಡುಗಿ ಗರ್ಭಿಣಿಯಾದರೆ ನಮ್ಮಲ್ಲಿಯಂತೆ ಅದನ್ನು ಮುಚ್ಚಿ ಕಳ್ಳಬಸಿರಂತ ತುಚ್ಛೀಕರಿಸಿ ಪಾಪಪ್ರಜ್ಞೆ ಮೂಡಿಸುವುದಿಲ್ಲ. ವಿವಾಹಿತ ತಾಯಿಗಿರುವಷ್ಟೇ ಗೌರವ ಅವಿವಾಹಿತ ತಾಯಿಗೂ ಉಂಟು. ಸಮಾಜ ಅದನ್ನು ಒಪ್ಪಿಕೊಂಡಿದೆ. ಸ್ತ್ರೀ ವಿಮೋಚನೆಯಲ್ಲಿ ಇದೊಂದು ಮುಖ್ಯವಾದ ಮೈಲಿಗಲ್ಲು ಎನ್ನಬಹುದು.

ಹೆಂಗಸು ಅಂದರೆ ತನ್ನ ಸುಖದ ಸಾಧನ ಅಂತ ತಿಳಕೊಂಡಿದ್ದಾನೆ ಪುರುಷ. ಗಂಡು-ಹೆಣ್ಣುಗಳು ಪರಸ್ಪರ ಪ್ರಾಮಾಣಿಕವಾಗಿರಬೇಕು. ಇಬ್ಬರೂ ಸಂತೋಷವನ್ನು ಆರಂಭ ಮಾಡಿದಾಗ ಇದ್ದದ್ದು ಸಂತೋಷದ ಉದ್ದೇಶ ಮಾತ್ರ. ಮದುವೆಯ ಆಲೋಚನೆಯಾಗಲಿ, ಭರವಸೆಯಾಗಲಿ ಬದ್ಧತೆಯಾಗಲಿ ಇರಲಿಲ್ಲ. ನೂರರಲ್ಲಿ ಒಂದು ಭಾಗ ಅಕಸ್ಮಾತ್ ಬಸುರಿಯಾಗುವ ಸಂಭವ ಇಂಥ ಎಲ್ಲ ಸಂದರ್ಭಗಳಲ್ಲೂ ಇರುತ್ತದೆ. ಹಾಗೆಂದು ಮದುವೆಯ ಪ್ರಪಾತದಲ್ಲಿ ಬೀಳೂದು, ಬೀಳಿಸೂದು ಯಾವ ನ್ಯಾಯ? ಎಂದು ಪ್ರಶ್ನೆ ಕಂಡುಬರುವುದುಂಟು. ಹೆಂಗಸನ್ನು ಮುಟ್ಟುವ ಮೊದಲು ಗಂಡಸು ಅದರ ಪರಿಣಾಮದಿಂದ ಜವಾಬ್ದಾರಿಯನ್ನರಿತು ಬದ್ಧನಾಗಬೇಕು. ಗಂಡಸಿಗೆ ಬುದ್ಧಿ ಕಲಿಸುವ ಸಾಕಷ್ಟು ಕಾನೂನುಗಳಿವೆ. ಅವುಗಳನ್ನು ಇನ್ನೂ ಬಿಗಿಮಾಡುವ ಹೋರಾಟ ನಡೀತಿದೆ. ಅವುಗಳನ್ನೆಲ್ಲ ತಿಳಿಯೂದು ವಿದ್ಯಾಭ್ಯಾಸದ ಅಂಗವಾಗಬೇಕು.

ಗಂಡು-ಹೆಣ್ಣುಗಳಿಗೆ ಸಹಜವಾಗಿ ಆಗಬೇಕಾದ ಅನುಭವವನ್ನು ಯಾರೂ ಕೂಡ ನೀತಿಯ ತಕ್ಕಡಿಯಲ್ಲಿಟ್ಟು ತೂಗಬಾರದು ಅನ್ನೂದು ವಿಮೋಚನೆಯ ಪ್ರಥಮ ನಿಯಮ. ಪ್ರಕೃತಿ ಸಹಜವಾದ ದೈಹಿಕ ಕಾಮನೆಯನ್ನು ಹತ್ತಿಕಬಾರದು. ಆದರೆ ಅದಕ್ಕಾಗಿ ಹೆಂಗಸು ಗಂಡಸಿನ ಯಜಮಾನಿಕೆಗೆ ಒಳಗಾಗಬಾರದು. ಹೆಂಗಸು ಹೆಂಗಸರೇ ಪರಸ್ಪರಾವಲಂಬಿಗಳಾಗಬೇಕು. ಅದೀಗ ವಿಮೋಚನೆಯ ಅತ್ಯುಚ್ಚಮೆಟ್ಟಿಲು. ಸ್ತ್ರೀ ಸಲಿಂಗಕಾಮವು ವಿಮೋಚನೆಯ ಒಂದು ಮುಖವೆಂದು ಪಶ್ಚಿಮ ದೇಶದ ಕೆಲವು ಸ್ತ್ರೀ ವಿಮೋಚನಾವಾದಿಗಳು ಬರೆದಿರುವುದನ್ನು ನಾವು ಕಾಣಬಹುದು. ವಿಮೋಚನೆ ಎನ್ನುವುದು ಚಳವಳಿಯ ಹೆಂಗಸರ ಜೊತೆ ಸ್ನೇಹವಾಗಿರಬಹುದು. ವಿವೇಕಿಯಾದ ಗಂಡಸು ಎಂದೂ ಅಂಥೋರನ್ನ ಮದುವೆಯಾಗುವುದಿಲ್ಲ.

ಕೆಲವು ಇಂಗ್ಲಿಷ್ ಕಾದಂಬರಿಗಳಲ್ಲಿ ಯಾವ ಹೆಣ್ಣುಪಾತ್ರಕ್ಕೆ ಸ್ವಲ್ಪ ಕಷ್ಟವಾಗುವ ಸನ್ನಿವೇಶ ಬಂದರೂ ಅವರ ವಿವರಣೆಯು ಸ್ತ್ರೀವಾದ, ಸ್ತ್ರೀ ಶೋಷಣೆಯ ಇತಿಹಾಸ, ಸ್ತ್ರೀಪರ ಚಳವಳಿಯ ಉಗಮಗಳನ್ನು ಲೇಖಕರು ಈ ಕಾದಂಬರಿಗಳಿಂದ ತಮ್ಮ ಕವಲು ಕಾದಂಬರಿಗೆ ಹರಿಯಬಿಟ್ಟಿರುವುದನ್ನು ಕಾಣಬಹುದು. ಪಶ್ಚಿಮ ದೇಶದಲ್ಲಿ ಅದರಲ್ಲಿಯೂ ಯಾರೂ ಯಾವ ಸಂದರ್ಭದಲ್ಲಿ ಮತ್ತೊಬ್ಬರ ಸ್ವಂತ ವಿಷಯದ ಬಗ್ಗೆ ಆಸಕ್ತಿಯನ್ನು ವ್ಯಕ್ತಪಡಿಸುತ್ತಿರಲಿಲ್ಲ. ಅಲ್ಲದೇ ಇಂಥ ಪಶ್ಚಿಮ ದೇಶದ ವಿಶ್ವವಿದ್ಯಾಲಯ-ಗಳಲ್ಲಿ ಪ್ರಗತಿ ತೋರಿಸದಿದ್ದರೆ ನೌಕರಿಯನ್ನು ನವೀಕರಿಸುತ್ತಿರಲಿಲ್ಲ.

ಪಶ್ಚಿಮ ದೇಶಗಳನ್ನು ಮತ್ತಷ್ಟು ಒಳಹೊಕ್ಕಿ ನೋಡಿದಾಗ, ಹೆಣ್ಣಿನ ಹೆರಿಗೆ ಬಾಣಂತನಗಳಿಗೆ ಯಾರ ತಾಯಿಯೂ ಬರಲ್ಲ. ಬಸುರಿಗೆ ವೈದ್ಯೆಯು ಮೊದಲೇ ಎಲ್ಲ ತಿಳಿವಳಿಕೇನೂ ಕೊಡ್ತಾರೆ. ಉದ್ಭವಿಸಬೇಕಾದ ಸಮಸ್ಯೆಗಳಿಗೆ ಅವಳ ಮನಸ್ಸಿನಲ್ಲಿ ಹುಟ್ಟಬಹುದಾದ ಎಲ್ಲ ಅನುಮಾನಗಳಿಗೆ ಸ್ಪಷ್ಟವಾದ ಉತ್ತರಗಳನ್ನು ಪ್ರಶ್ನೋತ್ತರ ರೂಪದಲ್ಲಿ ಚಿತ್ರಸಮೇತ ಬರೆದು ಮುದ್ರಿಸಿದ ಕಿರುಹೊತ್ತಗೆಗಳನ್ನು ಕೊಟ್ಟಿರ್ತಾರೆ. ಇನ್‌ಶೂರೆನ್ಸ್ ವಿರುದ್ಧವೂ ಈಗ ಚಳವಳಿ ಶುರುವಾಗಿದೆ. ಮಗುವಿನ ಹುಟ್ಟುಸಾಕಣೆಗಳು ತಾಯಿ ತಂದೆಯರ ಜವಾಬ್ದಾರಿ. ಹೆರಿಗೆ ಕೋಣೆಗೆ ಕೂಡ ಗಂಡನನ್ನ ಬಿಡ್ತಾರೆ. ತನ್ನ ಮಗು ಹೇಗೆ ಹುಟ್ಟುತ್ತದೆ ಅನ್ನೂದ ನೋಡಲಿ ಅಂತ. ಹಾಗಿದ್ದರೆ ಗಂಡಸಿಗೆ ತನ್ನ ಮಗುವಿನ ಮೇಲೆ ತಾದಾತ್ಮ್ಯ ಘನವಾಗುತ್ತೆ ಮತ್ತು ಜವಾಬ್ದಾರಿ ಹೆಚ್ಚುತ್ತದೆ. ಅದು ನಿಜವಿದ್ದರೆ ಈ ಪಶ್ಚಿಮ ದೇಶಗಳಲ್ಲಿ ಅಷ್ಟೊಂದು ಡೈವೋರ್ಸ್‌ಗಳು ಯಾಕೆ ಆಗ್ತಿವೆ? ಎಂಬುದು ಅನುಮಾನಾಸ್ಪದವಾಗಿದೆ.

ಹೆಣ್ಣುಹುಡುಗಿ ತನ್ನ ಕಾಲಿನ ಮೇಲೆ ತಾನು ನಿಲ್ಲುವಂತಾಗಲು ಶೈಶವದಿಂದಲೇ ತಕ್ಕ ತರಬೇತಿ ಕೊಡಬೇಕೆಂಬುದು ತಾಯಿಯ ಕಟ್ಟುನಿಟ್ಟಾದ ನಂಬಿಕೆಯಾಗಿರುತ್ತದೆ. ಅವಳು ತಾನೇ ಮೈ ಉಜ್ಜಿಕೊಂಡು ಸ್ನಾನವನ್ನು ಮಾಡಬೇಕು. ಅನಂತರ ಬಚ್ಚಲನ್ನು ತೊಳೆದು ಹೊರಗೆ ಬರಬೇಕು. ತನ್ನ ಶಾಲೆಯ ಸಮವಸ್ತ್ರವನ್ನು ತಾನೇ ಇಸ್ತ್ರಿ ಮಾಡಿಕೊಳ್ಳಬೇಕು ಎಂದು ಮುಂತಾದ ಶಿಸ್ತನ್ನು ಮೈಗೂಡಿಸಿಕೊಳ್ಳುವಂತೆ ಅವಳು ಒತ್ತಾಯಿಸುತ್ತಿದ್ದಳು. ಇದು ಪಶ್ಚಿಮ ದೇಶದ ಪದ್ಧತಿ ಸ್ವಾವಲಂಬನೆಯನ್ನು ರೂಢಿಸಿಕೊಳ್ಳದೆ ಸ್ವಾತಂತ್ರ್ಯವಿಲ್ಲ. ಹೆಣ್ಣುಮಕ್ಕಳು ಬೆಳೆಯುವಾಗಲೇ ಎಲ್ಲ ವಿಷಯದಲ್ಲೂ ಸ್ವಾವಲಂಬಿಗಳಾಗಿರಬೇಕು.

ಮುಟ್ಟಿನ ಅವಧಿಯಲ್ಲಿ ಹೆಂಗಸರ ಭಾವತೋಲನ ಸ್ವಲ್ಪ ಏರುಪೇರಾಗುತ್ತದೆ. ಗರ್ಭಿಣಿಯರಲ್ಲೂ ಕೂಡ ಇಂಥ ಏರುಪೇರು ಆಗಬಹುದು. ಹೆಣ್ಣಿನ ಬೋಳು ಹಣೆಯ, ವಿಕರ್ಷಕ ಕಣ್ಣುನೋಟ, ಸೂತಕ ಕಳೆಯ ಇವಳ ಮುಖ ನೋಡಿದರೆ ಅಂಥ ಭಾವುಕ ವರ್ತನೆ ಮಾಡಿ ಬೊಗಳಿಸಿಕೊಳ್ಳುವ ಅವಿವೇಕ ಮಾಡಬಾರದೆಂಬ ಎಚ್ಚರ ಮೂಡುವುದುಂಟು. ಹೆಂಗಸರ ಒಳನಡೆಗಳು ಬೇರೆ ಹೆಂಗಸರಿಗೆ ಬೇಗ ತಿಳಿಯುತ್ತವೆಯೇ ಹೊರತು ಗಂಡಸರಿಗೆ ಅರ್ಥವಾಗುವುದಿಲ್ಲ ಎಂಬ ಸಂಗತಿಯು ಕೆಲವು ಸಂದರ್ಭದಲ್ಲಿ ಅರ್ಥವಾಗದಿರಬಹುದು.

ಪಶ್ಚಿಮ ದೇಶದ ಹೆಣ್ಣಿನ ವಿಚಾರ ಜೀವನದ ರೀತಿನೀತಿಗಳು ಕೆಲವರನ್ನು ಪ್ರಭಾವಿಸುವುದುಂಟು. ಇದರಿಂದ ಪ್ರಭಾವಿತರಾದ ಮಹಿಳೆಯರು ಬಾಣಂತನಕ್ಕೆ ತಾಯೀನ ಕರೆಸೊಲ್ಲ. ಯಾವ ತಾಯಿಯೂ ಬರುವುದಿಲ್ಲ. ತನಗೆ ತಾನೆ ನಿಭಾಯಿಸಿಕೊಳ್ಳುತ್ತಾಳೆ. ಪ್ರಸವವಾದ ಒಂದು ವಾರದ ನಂತರ ಮಗೂನ ಡೇ ಕೇರ್‌ನಲ್ಲಿ ಬಿಟ್ಟು ನೌಕರಿಗೆ ಹೋಗುವ ಹೆಂಗಸರೂ ಇದಾರೆ. ಮಗಳ ಮನೇಲಿ ತಾಯಿ ಇದ್ದರೆ ಮಗಳ ಸಂಸಾರಕ್ಕೆ ಯಾವತ್ತೂ ಒಳ್ಳೆಯದಲ್ಲ. ಉತ್ತರ ಭಾರತದಲ್ಲಿ ತಂದೆ-ತಾಯಿಯರು ಹೆಣ್ಣುಮಗಳ ಮನೇಲಿ ಊಟ ಕೂಡ ಮಾಡುವುದಿಲ್ಲ. ಅವರಲ್ಲಿರುವಷ್ಟು ಕಟ್ಟುನಿಟ್ಟು ನಮ್ಮಲ್ಲಿಲ್ಲದಿದ್ದರೂ ಹೆಣ್ಣು ಮಗಳಿಂದ ಏನೂ ತೆಗೆದುಕೊಳ್ಳಬಾರದು, ಅವಳ ಮನೇ ಅನ್ನ ನೆರಳಿನಲ್ಲಿ ಬದುಕಬಾರದು ಅನ್ನುವ ತತ್ತ್ವವಂತೂ ಇದ್ದೇ ಇದೆ.

ಹೆಂಗಸಿಗೆ ಆರ್ಥಿಕವಾಗಿ ಲಕ್ವಾ ಹೊಡೆಸಿದ ಯುಗದ ಪದ್ಧತಿಯನ್ನು ಒಂದು ಮಹಾ ನೈತಿಕಮೌಲ್ಯ ಅಂತ ವೈಭವೀಕರಿಸಿ ಆರ್ಥಿಕ ಸ್ವಾತಂತ್ರ್ಯ ಪಡೀತಿರುವ ಹೆಂಗಸಿಗೂ ಹೇರುವ ಹುನ್ನಾರ ಇದು. ಆರ್ಥಿಕವಾಗಿ ಮುಂದುವರೆದ ಪಶ್ಚಿಮದ ಸುಖೀದೇಶಗಳಲ್ಲಿ ವೃದ್ಧರು ಮಗನನ್ನಾಗಲಿ ಮಗಳನ್ನಾಗಲಿ ಅವಲಂಬಿಸುವುದಿಲ್ಲ. ಅವರ ವಿಮೆ, ಉಳಿತಾಯ, ಪಿಂಚಣಿ, ವೃದ್ಧಾಪ್ಯವೇತನಗಳಿಂದ ತಮ್ಮ ತಮ್ಮ ಮನೆಯಲ್ಲಿ ಒಂಟಿಯಾಗಿರುತ್ತಾರೆ ಅಥವಾ ವೃದ್ಧಾಶ್ರಮ ಸೇರುತ್ತಾರೆ.

ಸೆಕ್ಸ್ ಎನ್ನುವುದು ಗಂಡಾಗಲಿ ಹೆಣ್ಣಾಗಲಿ ಮೂಲಭೂತ ಅಗತ್ಯ. ಅದನ್ನು ನಿಷೇಧಿಸುವುದು ಮೂಲಭೂತ ಮಾನವ ಹಕ್ಕಿನ ಉಲ್ಲಂಘನೆಯಾಗುತ್ತೆ. ಮತ್ತೆ ಮದುವೆಯೂ ಆಗದೆ ತಾನು ದುಡಿಯುವ ಕಷ್ಟವೂ ಇಲ್ಲದೆ ಬೇಕಾದವನೊಡನೆ ದೇಹಸುಖವನ್ನೂ ಪಡುತ್ತಾ ಇರುವ ಹಕ್ಕು ಮಹಿಳೆಗೆ ಉಂಟು. ದೇಹಸುಖದಲ್ಲಿ ಪಾವಿತ್ರ್ಯತೆಯ ಕಟ್ಟು ಇರಬೇಕೆಂಬ ನಂಬಿಕೆಯು ಬಹಳ ಪ್ರಮುಖವಾದುದು. ಆದರೂ ದೇಹವಿಕ್ರಯ ಮಾಡಿಕೊಳ್ಳುವ ಹೆಂಗಸಿನೊಡನೆ ಜುಗುಪ್ಸೆ ಉಂಟಾಗುವುದು. ಆಕ್ರಾಮಕಭಾರವು ಸಿಕ್ಕಿದವನ್ನು ನಜ್ಜುಗುಜ್ಜಾಗಿ ನರಳಿಸುವ ಭಾವ ಮತ್ತೆ ಕೆಲವು ಚಿತ್ತಿನಿ ಹೆಂಸರಿಗೆ ಹಣವಲ್ಲದೆ ವಿವಿಧ ರೀತಿಯ ಪುರುಷರೊಡನೆ ಸ್ವತಃ ಸುಖಿಸುವ ಶೋಕಿ ಇರುವುದುಂಟು. ಮಹಿಳಾ ವೇಶ್ಯೆಯರಿರುವ ಹಾಗೆ ಪುರುಷ ವೇಶ್ಯೆಯ ಸೇವಾ ಪದ್ಧತಿಯೂ ಬೆಳೀತಿದೆ. ಮಹಿಳೆಯರಲ್ಲಿ ಹಣ ಕೂಡಿ ಸುಖವನ್ನು ಕೊಳ್ಳುವ ಶಕ್ತಿ ಬೆಳೆದಂತೆ ಈ ಸೇವೆಯೂ ಬೆಳೆಯುತ್ತೆ. ಕೊಳ್ಳುವ ಸಾಮರ್ಥ್ಯ ವ್ಯಾಪಿಸಿದಷ್ಟೂ ಸರಬರಾಜು ತನಗೆ ತಾನೇ ಹೆಚ್ಚುತ್ತಿರುವುದನ್ನು ನಾವು ಕಾಣಬಹುದು.

ಪಶ್ಚಿಮ ದೇಶದಲ್ಲಿ ಹುಡುಗರಂತೆ ಹುಡುಗಿಯರಿಗೂ ಸ್ವಾತಂತ್ರ್ಯ ಕೊಟ್ಟು ಸುಮ್ಮನಿದ್ದುಬಿಡುತ್ತಾರೆ. ಹೆಣ್ಣುಮಕ್ಕಳು ಯಾವಾಗಲೂ ತಾಯಿಗೆ ವಿರುದ್ಧವಾಗಿರುತ್ತಾರೆ. ಎಂಥ ಮೂಢಾತ್ಮ ಆದರೂ ತಂದೆಯ ಪರ ಎಂಬ ಫ್ರಾಯ್ಡ್‌ನ ಸಿದ್ಧಾಂತ ಸರಿಯಾಗಿದೆ. ತರುಣತರುಣಿಯರು ಕೈಹಿಡಿದು ನಡೆಯುತ್ತಾ ನಡುನಡುವೆ ನಿಂತು ಪರಸ್ಪರ ಗಾಢಚುಂಬನದಲ್ಲಿ ಮೈಮರೆಯುವುದುಂಟು. ಟ್ಯೂಬ್‌ಸ್ಟೇಷನ್‌ಗಳಲ್ಲಿ ನಿಂತಿರುವಾಗ, ಪಯಣಿಸುವಾಗ ತರುಣ-ತರುಣಿಯರು, ಯುವಕ-ಯುವತಿಯರು ಮುಕ್ತವಾಗಿ ಮೈಕೈಗಳನ್ನು ಒತ್ತಿ ಹಿಡಿದು ತುಟಿ ಕುತ್ತಿಗೆಗಳನ್ನು ಕೆಲವೊಮ್ಮೆ ಹೆಂಗಸಿನ ಸ್ತನದ ಭಾಗಗಳನ್ನು ಚುಂಬಿಸುವಾಗ, ಅವಳ ನಿತಂಬಗಳನ್ನು ಹಿಡಿದು ತನ್ನ ಕಾಯಕ್ಕೆ ಒತ್ತಿ ಹಿಡಿದುಕೊಳ್ಳುವುದು ಕಂಡುಬರುವುದುಂಟು. ಗಂಡನಿಗಾಗಿ ಸಿಂಗರಿಸಿಕೊಳ್ಳುವುದೇ ದಾಸ್ಯದ ಮುಖ್ಯ ಬಗೆ. ತನಗಾಗಿ ಸಿಂಗರಿಸಿಕೊಬೇಕು. ವಿರುದ್ಧ ಲಿಂಗಿಯನ್ನು ಆಕರ್ಷಿಸುವುದಕ್ಕೆ ಮಾತ್ರವಲ್ಲ, ಇನ್ನಿತರರನ್ನೂ ಕೂಡ ಆಕರ್ಷಿಸಿಕೊಳ್ಳುತ್ತಿದ್ದಳು.

ಮಹಿಳೆಯರ ಮೇಲೆ ಹಣವುಳ್ಳ ಗಿರಾಕಿಗಳು ಮಾಡಿದ ದೌರ್ಜನ್ಯ ಅಮಾನುಷವಾದುದು. ಧನಮದ, ದೇಹಮದಗಳಿಂದ ಕೂಡಿ ಅಮಾಯಕ, ನಿಸ್ಸಹಾಯಕ ಮಹಿಳೆಯರನ್ನು ಹೀನಕೃತ್ಯಕ್ಕೆ ಎಳೆದು ಮೃಗೀಯ ಲಾಲಸೆಯನ್ನು ತೀರಿಸಿಕೊಳ್ಳುತ್ತಿದ್ದ ಈ ಗಂಡಸರನ್ನೂ ಶೋಷಣೆಗೆ ಒಳಗಾಗಿರುವ ಈ ಮಹಿಳೆಯರನ್ನೂ ಪೊಲೀಸರು ಕೂಡ ಒಂದೇ ತಕ್ಕಡಿಯಲ್ಲಿ ತೂಗುವುದುಂಟು.

ಪಶ್ಚಿಮದೇಶಗಳಲ್ಲಿ ಮಹಿಳಾ ಚಳವಳಿಯ ಕಾರ್ಯಕರ್ತೆಯರು ಜಮಾಯಿಸತೊಡಗುವುದುಂಟು. ಮಹಿಳಾ ಶೋಷಕರಿಗೆ ಧಿಕ್ಕಾರ. ಮಹಿಳಾ ಶೋಷಕರಿಗೆ ಗಲ್ಲುಶಿಕ್ಷೆಯಾಗಬೇಕು. ಮಹಿಳೆಯನ್ನು ಅಪಮಾನಿಸುವವರನ್ನೂ ನೇಣುಗಂಬಕ್ಕೇರಿಸಬೇಕು, ಮಹಿಳೆಯಾದವಳನ್ನು ಅನೀತಿಗೆಳೆಯುವವರನ್ನು ಬಿಸಿಲಿನಲ್ಲಿ ನಿಲ್ಲಿಸಿ ಕಲ್ಲು ಹೊಡೆದು ಸಾಯಿಸಬೇಕು ಎಂಬ ಘೋರ ನ್ಯಾಯದ ಹಕ್ಕೊತ್ತಾಯ ಮಾಡುವ ಘೋಷಣೆಗಳನ್ನು ಒಂದೇ ಸಮನೆ ಕೂಗುವುದುಂಟು. ಗಂಡಸು ಆಪಾದಿತರ ಮುಖವನ್ನು ಪೂರ್ತಿ ತೋರಿಸಬೇಕು. ಅವರಲ್ಲಿ ಯಾರಿಗೂ ಮುಖ ಮುಚ್ಚಿಕೊಳ್ಳುವ ಅವಕಾಶ ಕೊಡಕೂಡದು ಎಂಬ ಬೇಡಿಕೆಯನ್ನು ಮುಂದೆ ಇಟ್ಟು ಚಳವಳಿ ಮಾಡುವುದು ಕಂಡುಬರುತ್ತದೆ.

ಮಹಿಳೆಯಾದವಳು ಪುರುಷನಿಂದ ಗರ್ಭ ಧರಿಸಿ ಯಾರ ಹೆಸರೂ ಹೇಳದೆಯೇ ಮಗು ಹೆತ್ತರೆ ಹೆಣ್ಣಿನ ಸ್ವಾತಂತ್ರ್ಯವನ್ನು ಮತ್ತೊಂದು ಹೆಜ್ಜೆ ಮುಂದೆ

ಒಯ್ದಂತೆ, ಗಂಡಸಿನ ಪಾಲುದಾರಿಕೆ ಸ್ವಲ್ಪವೂ ಇಲ್ಲದೆ ಹೆಣ್ಣು ತಾಯಿಯಾಗುವಂತಿದ್ದರೆ ಅದೀಗ ಸಂಪೂರ್ಣ ಸ್ವಾತಂತ್ರ್ಯ ಪ್ರಕೃತಿಯು ಹೆಣ್ಣನ್ನು ಬಂಧಿಸಿಟ್ಟಿದೆ, ಇದು ಅನ್ಯಾಯ ಅನ್ನಿಸತೊಡಗಿತು. ಯಾವ ಗುರುತು ಪರಿಚಯದ ಗಂಡಸಿನ ದೈಹಿಕ ಸಂಪರ್ಕವೇ ಇಲ್ಲದೇ ತನಗೆ ಬೇಕಾದ ಜನಾಂಗ ಎತ್ತರ ಮೈಕಟ್ಟು ಬಣ್ಣ ಬುದ್ಧಿಶಕ್ತಿಗಳ ಗಂಡಸಿನ ವೀರ್ಯವನ್ನು ವೀರ್ಯಬ್ಯಾಂಕ್‌ನಿಂದ ಪಡೆದು ಚುಚ್ಚುಮದ್ದಿನಲ್ಲಿ ಹೊಗಿಸಿಕೊಂಡು ಗರ್ಭಿಣಿಯಾಗುವ ಪ್ರಯೋಗ ಪಶ್ಚಿಮ ದೇಶಗಳಲ್ಲಿ ಬಂದಿದೆಯಂತೆ. ಮುಂದುವರೆದರೂ ಹೆಂಗಸನ್ನು ಅಣಕಿಸುವ ಹಾಳು ಗಂಡಸಿನ ವೀರ್ಯದ ಅವಲಂಬನೆ! ಎಂಬ ತಿರಸ್ಕಾರ ಹುಟ್ಟುತ್ತಿತ್ತು.

ಮಹಿಳೆಯ ಲೈಂಗಿಕ ಸ್ವಾತಂತ್ರ್ಯದ ಬಗೆಗೆ, ಒಬ್ಬನ ಬಸಿರನ್ನು ಹೊತ್ತಿರುವಾಗಲೇ ಇನ್ನೊಬ್ಬನನ್ನು ಒತ್ತಾಯದ ಮದುವೆ ಸಿಕ್ಕಿಸುವುದು ಅನ್ಯಾಯ ಅಂತ ಭಾವಿಸಬಹುದು. ಈಕೆ ದೇಹಶಕ್ತಿಯಲ್ಲಿ ತನಗಿಂತ ಮಿಗಿಲಾದವಳು. ಪೇಟೆ ಬೀದೀಲಿ ನಿಲ್ಲಿಸಿ ಆಕೆಯ ಸೀರೆ ಕಿತ್ತುಹಾಕಿ ಬರಿಮೈ ಮಾಡುವುದುಂಟು. ದಾಂಪತ್ಯವೆಂದರೆ ಪರಸ್ಪರ ಮಾತನಾಡದೆ ಹಂಚಿಕೊಳ್ಳದೆ ಜೊತೆಯಲ್ಲಿರುವುದು ಅಷ್ಟೆ ಅಲ್ಲ. ದಾಂಪತ್ಯಸುಖ ತಾನು ಅನುಭವಿಸದ್ದೇನಲ್ಲ. ಅದೂ ಅಮೆರಿಕದ ಬಿಳಿ ಹೆಂಗಸರು, ಮುಕ್ತಕಾಯ, ಮುಕ್ತ ಭಾವ, ಮುಕ್ತ ಮಾತುಗಳಿಂದ ಪರಸ್ಪರರೊಳಗೆ ಧುಮಿಕಿ ಹರಿದು ತನ್ನತನವನ್ನು ಕಳೆದುಕೊಳ್ಳುತ್ತದೆ. ಹೆಂಡತಿಯಾದವಳು ಗಂಡನಂತೆ ಬೇಗ ಮುದುಕಿಯಾಗಿರುವುದಿಲ್ಲ. ಕೂದಲು ತುಸು ವಿರಳವಾಗಿದ್ದರೂ ಕಪ್ಪಗೆ ಮಿಂಚುವ ಡೈ ಮಾಡಿಕೊಂಡಿದ್ದಳು.

ಕೆಲವು ಮಹಿಳೆಯರು ದಾಂಪತ್ಯಸುಖದಿಂದ ವಂಚಿತಳಾಗಿರುವುದನ್ನು ಕಾಣಬಹುದು. ಗಂಡ ಅನ್ನಿಸಿಕೊಂಡೋನು ತಾನಾಗಿಯೇ ತನ್ನನ್ನು ಹಸಿವಿಗೆ ಸಿಕ್ಕಿಸಿರುವಾಗ ಬೇರೆ ದಾರಿಯನ್ನು ಕಂಡುಕೊಳ್ಳುವುದುಂಟು. ದೇಹತೃಪ್ತಿಯು ಪ್ರತಿಯೊಬ್ಬ ಹೆಂಗಸಿನ ಆಜನ್ಮ ಸಿದ್ಧ ಹಕ್ಕು. ಕೆಲವು ಸಂದರ್ಭದಲ್ಲಿ ಮಹಿಳೆಗೆ ವಿಚ್ಛೇದನ ಸಿಗುವುದುಂಟು. ಈಗ ಮದುವೆಯಾಗಲು ಯಾವ ಅಡ್ಡಿ ಆತಂಕವೂ ಇಲ್ಲ. ಸ್ತ್ರೀಯಾದವಳು ತನ್ನ ಆರೋಗ್ಯ, ಮೈಕಟ್ಟು, ಮುಖಲಕ್ಷಣ, ದಟ್ಟ ತಲೆಕೂದಲು, ಎಲ್ಲಕ್ಕಿಂತ ಹೆಚ್ಚಾಗಿ ಸದ್ಯದಲ್ಲೇ ಜಿನಿವಾಕ್ಕೆ ಹೆಓಗಿ ಜಾಗತಿಕ ಕಂಪನಿಯ ಮುಖ್ಯಸ್ಥನಾಗಿ ವಹಿಸಿಕೊಳ್ಳುವ ಹುದ್ದೆಗಳಿಂದ ಮೂವತ್ತೈದು ನಲವತ್ತರ ಅಂತರದ ಸುಂದರಳೂ ಸುಷ್ಠ ಮೈಕಟ್ಟಿನವಳೂ ವಿದ್ಯಾವಂತೆಯೂ ಆದ ಕುಮಾರಿಯೋ, ವಿಧವೆಯೋ ಅಥವಾ

ವಿಚ್ಛೇದಿತಳೋ ಆದವಳು ಸಿಕ್ಕುವುದೇನೂ ಕಷ್ಟವಿಲ್ಲವೆಂಬ ಭರವಸೆ ಇದ್ದರೂ ಯಾಕೋ ಮರುಮದುವೆಯ ತಂಟೆ ಬೇಡವೆನ್ನಿಸುತ್ತದೆ.[೧]

ಒಟ್ಟಿನಲ್ಲಿ ಮಹಿಳೆಯರನ್ನು ನಿಯಂತ್ರಣದಲ್ಲಿರುವ ಯೋಜನೆ ಸಿದ್ಧಪಡಿಸಿದ ನಂತರವೇ ಸ್ತ್ರೀಯರ ಕಷ್ಟದ ದಿನಗಳು ಆರಂಭಗೊಂಡಿವೆ. ಜಾತಿ-ಕುಲಗಳ ನೆಲೆಯಿಂದ ಮನುಷ್ಯನ ಆಲೋಚನೆಗಳು ಆರಂಭಗೊಂಡದ್ದೇ ಒಂದರ್ಥದಲ್ಲಿ ಅಸಮಾನತೆಯ ಉಗಮಕ್ಕೆ ಕಾರಣಗಳಾಗಿವೆ. ಹೆಣ್ಣು ಯಾರನ್ನು ವಿವಾಹವಾಗಬೇಕು, ಯಾರನ್ನು ಆಗಬಾರದು, ಹೆಣ್ಣು ಸಾಮಾಜಿಕವಾಗಿ ಯಾವ ಕಾರ್ಯನಿರ್ವಹಿಸಬೇಕು, ಯಾವುದನ್ನು ನಿರ್ವಹಿಸಬಾರದು, ಹೆಣ್ಣಿನ ಸ್ವಾಭಾವಿಕ ಬದುಕಿಗೆ ಧಕ್ಕೆ ಒದಗಿದೆ. ಭಾರತೀಯ ಸಮಾಜದಲ್ಲಿ ಕವಲುದಾರಿ ಹಿಡಿಯುತ್ತಿರುವ ಮೌಲ್ಯಗಳನ್ನು ಹೃದಯ ಕಲಕುವಂತೆ ಶೋಧಿಸುತ್ತಾ ಸಮಕಾಲೀನ ಜೀವನಕ್ಕೆ ಕನ್ನಡಿಯಾಗಿರುವ ಕಾದಂಬರಿಯಿದು.

**೧.೬. 'ಕವಲು' ಕಾದಂಬರಿಯಲ್ಲಿನ ಭಾರತೀಯ ಮಹಿಳೆಯ ಚಿತ್ರಣ**

ಎಸ್.ಎಲ್.ಭೈರಪ್ಪನವರ ಇತ್ತೀಚಿನ ಕಾದಂಬರಿಯಾದ 'ಕವಲು' ಕ್ಷಿಪ್ರಗತಿಯಲ್ಲಿ ವಿಚಾರಾಸ್ಪದಗಳಿಗೆ ಬಹಳ ಹತ್ತಿರವಾದುದು. ಈ ಕಾದಂಬರಿಯು ಮುಖ್ಯವಾಗಿ ಪಾತಾಳಕ್ಕಿಳಿದ ಸೃಜನಶೀಲತೆಯನ್ನು ವ್ಯಕ್ತಪಡಿಸುತ್ತದೆ. ಲೇಖಕರೇ ಹೇಳುವಂತೆ ಇಡೀ ಭಾರತೀಯ ಕುಟುಂಬದಲ್ಲಿ ಆಗುತ್ತಿರುವ ಬದಲಾವಣೆಯನ್ನು ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಅತ್ಯಂತ ಪ್ರಮುಖವಾದ ತಂತ್ರವನ್ನು ಬೆಳೆಸುವುದೇ ಕೌಟುಂಬಿಕ ಬದಲಾವಣೆ, ಅಂದರೆ ಜಾಗತಿಕ, ಉದಾರೀಕರಣದ, ವಿಷಮ ಬೆಳವಣಿಗೆಯಲ್ಲಿ ಸೃಷ್ಟಿಯಾಗಿರುವ ತಲ್ಲಣಗಳೇ ಕಾದಂಬರಿಯ ಮುಖ್ಯ ಆಶಯವಾಗಿದೆ. ಇಂತಹ ಅವಸ್ಥೆ ರೂಪದಲ್ಲಿ ಪರಿಭವಿಸುವ ಸಾಮಾಜಿಕ, ನೈತಿಕ ಪರಿಣಾಮಗಳು ಕಾದಂಬರಿಯಲ್ಲಿ ವ್ಯವಸ್ಥಿತವಾದ ರೀತಿಯಲ್ಲಿ ಕಾಡುತ್ತಾ ಹೋಗುತ್ತದೆ. ಹಾಗೆಯೇ ಭವಿಷ್ಯದ ಜನಾಂಗದ ಮೇಲೆ ಆಗುವ ಪರಿಣಾಮಗಳ ಬಗ್ಗೆ ಚರ್ಚೆಗೆ ಪರಿಹಾರ ಸಿಗುವಲ್ಲಿ ಈ ಕಾದಂಬರಿಯು ಪ್ರಮುಖ ಶಕ್ತಿಯಾಗಿದೆ.

ಭಾರತದ ಇತಿಹಾಸವನ್ನು ಮತ್ತು ಅದನ್ನು ತಿರುಚುವಂತಹ ವಿಲಕ್ಷಣ ರೀತಿಯಿದೆಯಲ್ಲಾ ಹಾಗೇ ಒಂದು ನಿಖರ ಉತ್ತಮ ತಾಂತ್ರಿಕ ಕೌಶಲ್ಯತೆಯ

---

೧. ಕವಲು (ಕಾದಂಬರಿ), ಪುಟ ಸಂಖ್ಯೆ ೨೩, ೩೧, ೫೩, ೧೦೫, ೧೪೩, ೧೯೯,
ಕರ್ತೃ: ಎಸ್.ಎಲ್.ಭೈರಪ್ಪ.

ಆವರಣದಲ್ಲಿ ಮೇಳೈಸಿದೆ. ಈ ದೇಶದ ವಿಲಕ್ಷಣ ಅವಸ್ಥೆಯನ್ನು ಹೇಳುತ್ತಾ ಅನ್ಯಧರ್ಮದ ವಿಮರ್ಶೆಯಲ್ಲಿ ತೊಡಗುತ್ತಾರೆ. ಏಕೆಂದರೆ ಅವರ ಭಾವನೆ ಭಾರತೀಯ ಪರಿಸ್ಥಿತಿಯ ಪೂರಕವಾಗಿಯೇ ಇದೆ. ಇವತ್ತಿನ ಭಾರತದ ಸಂಸಾರಗಳು ಮಹಿಳಾವಾದಿ ಹೆಂಗಸರಿಂದಲೇ 'ಪುಡಿಪುಡಿ' ಆಗಿ ಹೋಗುತ್ತಿದೆ. ಸಮಕಾಲೀನ ಜೀವನಕ್ಕೆ ಕನ್ನಡಿಯಾಗಿರುವ ಕಾದಂಬರಿಯಿದು ಎಂದು ಹೇಳಿದರೆ ತಪ್ಪಾಗಲಾರದು. ಪ್ರಕೃತಿಯಿಂದ ಪ್ರಣಯ, ಸಂಸ್ಕೃತಿಯಿಂದ ದಾಂಪತ್ಯ ಕಾದಂಬರಿಯ ವಸ್ತುವಾಗಿರು–ವುದುಂಟು.

ಆಧುನಿಕ ಕಾನೂನು ಹೆಣ್ಣು ಅಂದರೆ ಪತ್ನಿಯಾಗಿರಬೇಕು ಎಂದಿರುವುದರಿಂದ ಕಾನೂನಿನ ಸಮಸ್ಯೆ ಉಂಟಾಗಿದೆ. ಸ್ತ್ರೀವಾದಿಗಳು ಕುಟುಂಬವನ್ನು ಗಂಡಪತ್ನಿಗೆ ಸೀಮಿತಗೊಳಿಸಿರುವುದರಿಂದ ಆಧುನಿಕ ಜೀವನ ಧೋರಣೆ ದುರಂತಕ್ಕೆ ತಳ್ಳಿದೆ ಎಂಬುದನ್ನು ಈ ಕಾದಂಬರಿ ವಿವರಿಸುತ್ತದೆ. ಮಹಿಳೆಯರು ಯಾವ ಕಾಲಕ್ಕೂ ಪುರುಷರನ್ನು ಅವಲಂಬಿಸಿರಬಾರದು. ವಿವಾಹ ಪುರುಷ ಪ್ರಧಾನ ವ್ಯವಸ್ಥೆಯ ತಂತ್ರ ಎಂಬುದು ಮಹಿಳಾವಾದಿಗಳ ರೂಪಿಸುವ ಸನ್ನಿವೇಶವನ್ನು ಈ ಕಾದಂಬರಿ ಕಟ್ಟಿಕೊಡುತ್ತದೆ. ಕಾದಂಬರಿ ಪ್ರಧಾನ ಪಾತ್ರವಾದ ಜಯಕುಮಾರನ ಎರಡನೇ ಪತ್ನಿ ಮಂಗಳೆ, ಆತನ ಮೊದಲ ಪತ್ನಿ ಮಂಗಳೆ, ಆಧುನಿಕ ಬದುಕಿನಲ್ಲಿ ಅವಕಾಶಗಳು – ಸ್ವಾತಂತ್ರ್ಯ ಜಾಸ್ತಿಮಾಡಿ, ವಿವೇಚನೆ ಕಡಿಮೆಯಾಗಿಸಿದೆ.

'ಕವಲು' ಕಾದಂಬರಿಯು ಕೌಟುಂಬಿಕ ಕಟುಸತ್ಯದ ವಿಷಯವನ್ನು ಒಳಗೊಂಡಿದೆ. ಅಲ್ಲದೇ ಮಹಿಳೆಯ ಅಸಹಾಯಕತೆಯನ್ನು ಪ್ರತಿಬಿಂಬಿಸಿದೆ. ಭಾರತದ ಕುಟುಂಬ ವ್ಯವಸ್ಥೆ ಉನ್ನತ ಸ್ಥಾನ ಪಡೆದಿದೆ. ಗಂಡ–ಹೆಂಡತಿ ಸಹಜ ಕಾಮ ನೈತಿಕತೆಯಿಂದ ಸ್ವಂತ ಕಂಪನಿಯಂತೆ ಸಂಸಾರ ನಡೆಸುತ್ತಿದ್ದಾರೆ. ಈ ಕಾದಂಬರಿ ಗಂಡಸರ ಬಗೆಗೆ ಅನುಕಂಪ ತರಿಸುವ ಮತ್ತು 'ಸಮಕಾಲೀನ ಭಾರತದ ಮಹಿಳಾವಾದಿಗಳ' ಬಗ್ಗೆ ತಾತ್ಸಾರ ಮೂಡಿಸುವ ಕೆಲಸವನ್ನು ಎತ್ತಿ ಹಿಡಿಯುತ್ತದೆ. 'ಕವಲು ದಾರಿ ಹಿಡಿಯುತ್ತಿರುವ ಮೌಲ್ಯಗಳನ್ನು ಹೃದಯ ಕಲಕುವಂತೆ ಶೋಧಿಸುವ' ಕೃತಿ ಅನ್ನುತ್ತಾ ಭಾರತದ ಹೆಣ್ಣುಮಕ್ಕಳ ಮಾನ ಹರಾಜಿಟ್ಟು ಸಾಲದೇ ಕೆಲವರನ್ನು ಬೀದಿಗೆಳೆದಿದ್ದಾರೆ. ಇದಕ್ಕೆಲ್ಲ ಅರಿವಿನ ಹೆಣ್ಣುಗಳೇ ಕಾರಣ ಎಂಬಂತಿದೆ ಕಾದಂಬರಿಯ ಒಳ ಹೂರಣ.

ಭಾರತೀಯ ಮಹಿಳೆಯರು ತಮ್ಮ ಸಮುದಾಯಕ್ಕಾಗಿ ಹಿಂದೆಂದೂ ಇಲ್ಲದ ಒಗ್ಗಟ್ಟಿನಲ್ಲಿ ದನಿ ಎತ್ತುತ್ತಿರುವುದು ದಬ್ಬಾಳಿಕೆ ಮನೋಭಾವದ ಗಂಡಸರ ಅಹಮ್ಮಿಗೆ ಎಷ್ಟರ ಮಟ್ಟಿಗೆ ಘಾಸಿಕೊಟ್ಟಿದೆ ಅನ್ನುವುದನ್ನು 'ಕವಲು' ಸಮರ್ಥವಾಗಿ ತಿಳಿಸಿಕೊಡುತ್ತದೆ. ಈ ಮಹಿಳೆಯಾದವಳನ್ನು ಲೈಂಗಿಕ ಅಭೀಪ್ಸೆಯ ದಾಸಿಯನ್ನಾಗಿ ಚಿತ್ರಿಸಿರುವ ಕಾದಂಬರಿಕಾರರ ರೀತಿ ಅಸಹ್ಯವನ್ನಲ್ಲದೆ ಮತ್ತೇನನ್ನೂ ಮೂಡಿಸುವುದಿಲ್ಲ. ಮತ್ತಿದನ್ನು ಭಾರತೀಯ ಸಮಾಜದಲ್ಲಿಯೂ ಮಾತ್ರವಲ್ಲದೇ ಬೇರೆ ರೀತಿಯಿಂದಲೂ ಮುತ್ತುದುರಿಸಿ ಮತ್ತಷ್ಟು ಬೇಸರ ತರಿಸಿದ್ದಾರೆ. ಇಡೀ ಕಾದಂಬರಿಯಲ್ಲಿ ಸಮಾಜಮುಖಿಯಾಗಿರುವ ಅಥವಾ ಚಳವಳಿಯಲ್ಲಿ ತೊಡಗಿರುವ ಯಾವೊಬ್ಬ ಮಹಿಳೆಯೂ ಕೆಲವರ ಕಣ್ಣಿಗೆ ಒಳ್ಳೆಯವಳಾಗಿ ಕಾಣದೆ ಇರಬಹುದು. ಅದೇ ಉದ್ಯೋಗಸ್ಥ ಮಹಿಳೆಯು ಕದ್ದು ಬಸಿರಾಗುವುದು, ಅದರ ಸುತ್ತ ಹೆಣೆದುಕೊಳ್ಳುವ ತೊಳಲಾಟ, ದೂರ ಸರಿಯುತ್ತ ಹತ್ತಿರವಾಗುವ ತಿರುವುಗಳು, ಕೊನೆಗೆ ಯಾರೋ ಒಬ್ಬರಿಗೆ ಹೂ ಮುಡಿಸಿ ಸಾಂಸ್ಕೃತಿಕ ಮೌಲ್ಯವನ್ನು ಎತ್ತಿ ಹಿಡಿದಿರುವುದನ್ನು ಕಾಣಬಹುದು. ಕವಲಿನಲ್ಲಿರುವ ಹೊಸತೆಂದರೆ, ಕಾದಂಬರಿಯ ತುಂಬೆಲ್ಲಾ ಹಾದರದ ವಾಸನೆಯೇ ತುಂಬಿರುವುದನ್ನು ಕಾಣಬಹುದು.[೧]

ಲೈಂಗಿಕ ಸ್ವಾತಂತ್ರ್ಯವನ್ನು ಗೌರವಿಸುವ ಈ ಭಾರತೀಯ ಮಹಿಳೆ ಪರಮ ಅನೈತಿಕ, ನೀಚಳು ಎಂಬ ಅಕ್ಷರ ಬಿಂಬವಾದ ಮಾತು ಈ ಹೊತ್ತೂ ಮೈನಡುಗಿಸುತ್ತದೆ. ಯಾವುದೇ ಬಟ್ಟೆ ತೊಟ್ಟು, ಹಣೆಬೊಟ್ಟು, ಕಳಚಿಟ್ಟರೂ ತುಡಿಯಬಲ್ಲ ಅಂತಃಕರಣ ಹೆಣ್ಣು ಜಾತಿಯದು. ಅಲ್ಲದೇ ಈ ಲೋಕದಲ್ಲಿ ಹೆಣ್ಣು ದಿನವೂ ಸಾಯುತ್ತಿರುವುದನ್ನು, ಓದು-ಬರಹ ಕಲಿತ ಗಂಡಸರು ಹೆಂಗಸರಾಗುತ್ತಾ ನಡೆದಿದ್ದರೂ ಭಾರತದಲ್ಲಿ ಅತ್ಯಾಚಾರ, ಹೆಣ್ಣು ಭ್ರೂಣಹತ್ಯೆ ಮತ್ತು ವರದಕ್ಷಿಣೆ ಸಾವುಗಳ ಸಂಖ್ಯೆ ತನ್ನ ಎತ್ತರ ಕಾಯ್ದುಕೊಂಡಿರುವುದನ್ನು ಕಾಣಬಹುದು. ಆದರೆ, ಆಧುನಿಕತೆಯ ಪರಿಣಾಮದ, ಅನಿವಾರ್ಯ ಭಾಗವಾಗಿ ಬದುಕುತ್ತಿರುವ ಗಂಡು-ಹೆಣ್ಣುಗಳ ಕಥೆ ಇಲ್ಲಿ ಹೆಣ್ಣಿನ ವ್ಯಕ್ತಿತ್ವವನ್ನು ನಕಾರಾತ್ಮಕವಾಗಿಯೇ ಚಿತ್ರಿಸುವುದರ ಕಡೆಗೆ ಮುಖಮಾಡಿದೆ. 'ಕವಲು' ಇಲ್ಲಿ ಪ್ರಧಾನವಾಗಿ ಮಹಿಳೆ ಹಿಡಿಯುತ್ತಿರುವಂತಹ ಇನ್ನೊಂದು ದಾರಿಯನ್ನೇ ಸೂಚ್ಯವಾಗಿ ಹೇಳುತ್ತದೆ.

---

೧. ಪಾತಾಳಕ್ಕಿಳಿದ ಸೃಜನಶೀಲತೆ (ಪ್ರಜಾವಾಣಿ - ಸಾಪ್ತಾಹಿಕ ಪುರವಣಿ ಪತ್ರಿಕೆ), ಪುಟ ಸಂಖ್ಯೆ ೪, ಭಾನುವಾರ ೨೫ ಜುಲೈ ೨೦೧೦.

ಆಧುನಿಕ ಜೀವನ ಕ್ರಮವು ಭಾರತೀಯ ಮಹಿಳೆಯಾದವಳಿಗೆ ಸ್ವಾತಂತ್ರ್ಯ-ವನ್ನೂ, ಅಭಿಪ್ರಾಯದ ಹಕ್ಕನ್ನೂ ಕೊಟ್ಟಿದೆ ನಿಜ, ಆದರೆ ಅದರ ಜೊತೆಗೆ ಅಗಾಧ ಆತಂಕ ಹಾಗೂ ಜವಾಬ್ದಾರಿ ಅಲ್ಲದೇ ಮುಖಾಮುಖಿಯಾಗಬೇಕಾದ ಕ್ರೂರತೆಗಳ ಕಡೆಗೂ ದೃಷ್ಟಿ ಹಾಯಿಸುವಂತೆ ಮಾಡಿದೆ. ಕುಟುಂಬ ಕೇಂದ್ರಿತವಾದ ಈ ಕಾದಂಬರಿಯ ಕಥನ ಚಿತ್ರಣದಲ್ಲಿ ಪ್ರಧಾನವಾಗಿ ಎರಡು ಕುಟುಂಬಗಳ ಚಿತ್ರಣವಿದೆ. ಈ ಎರಡೂ ಆಧುನಿಕತೆಯ ಪ್ರತೀಕವಾದ ಮಹಿಳೆ ಪಾತ್ರಗಳ ಚಿತ್ರಣದ ತಾರ್ಕಿಕ ಬೆಳವಣಿಗೆಯೆಂಬಂತೆ ಸ್ತ್ರೀಸ್ವಾತಂತ್ರ್ಯ ಮತ್ತು ಹಕ್ಕುಗಳ ಪರವಾಗಿ ವಾದಿಸುವ ಹಾಗೂ ಕ್ರಿಯಾಶೀಲರಾಗಿರುವ ಎಲ್ಲ ಮಹಿಳೆಯರೂ ಇಲ್ಲಿ ಇಪ್ಪತ್ನಾಲ್ಕು ಗಂಟೆ ಗಂಡಸರನ್ನು ಹೇಗೆ ಮುಗಿಸಬೇಕು? ಯಾವ ಕಾನೂನಿನ ಅಡಿಯಲ್ಲಿ ಸಿಕ್ಕಿಸಬೇಕು? ಎನ್ನುವಂತಹ ತಂತ್ರಗಾರಿಕೆಯಲ್ಲಿಯೇ ತೊಡಗಿರುವಂತೆ ತೋರುತ್ತಾರೆ.

ಈ ಕಾದಂಬರಿ ಅತ್ಯಂತ ಅಪಕ್ವವಾದ ಮತ್ತು ಆಧುನಿಕತೆಗೆ ಒಳಗಾದ ಭಾರತೀಯ ಮಹಿಳೆಯನ್ನು ವಿರೋಧಿಸಲೆಂದೇ ಮತ್ತು ಛೇಡಿಸಲೆಂದೇ ಬೆಳೆಯುವ ಕಥನವಾಗಿ ಕಾಣುತ್ತದೆ. ಕಾಮ ಮತ್ತು ಆಧುನಿಕತೆ ಇಲ್ಲಿ ಸ್ತ್ರೀ-ಪುರುಷರನ್ನು ಪರಸ್ಪರ ಸಂಗಾತಿಗಳಾಗಿ ಕಂಡಿದೆ. ಇಲ್ಲಿ ಬಳಕೆಯಾಗುವ 'ಕಾಮವೂ' ಹೆಣ್ಣಿನ ತಂತ್ರಗಾರಿಕೆಯ ಭಾಗವಾಗಿಯೇ ರೂಪುಗೊಂಡಿದೆ. ಒಡೆದು ಹೋದ ಕುಟುಂಬಕ್ಕೆ ಕಾರಣಗಳು ಆಧುನಿಕತೆಯ ಭಾಗವಾಗಿ ಬರುವ ಈ ಭಾರತೀಯ ಮಹಿಳೆಯಲ್ಲಿಯೇ ಇವೆ ಎನ್ನುವುದು ಈ ಕಾದಂಬರಿಯ ನಿರೂಪಣಾ ವಿನ್ಯಾಸದ ರೀತಿ ತಿಳಿಸಿಕೊಡುತ್ತದೆ. ಆಧುನಿಕತೆಯ ವ್ಯಕ್ತಿತ್ವದ, ಹೆಣ್ಣುಗಳನ್ನು ವಿಡಂಬನಾತ್ಮಕವಾಗಿ ನೋಡುವ ವಿನ್ಯಾಸದಿಂದಾಗಿ ಕಾದಂಬರಿಗೆ ಒಂದು ದೊಡ್ಡ ಪೆಟ್ಟು ಬಿದ್ದಿದೆ ಎನ್ನುವುದು ಅರ್ಥವಾಗಬೇಕು. ಗಂಡಂದಿರು ಆಧುನಿಕತೆಯ ಸಂದರ್ಭದಲ್ಲಿ ಭಾರತೀಯ ಹೆಣ್ಣಿನ ಈ ಸ್ವತಂತ್ರ ವ್ಯಕ್ತಿತ್ವದ ಬೆಳವಣಿಗೆಯನ್ನು ತಾಳದೇ, ಇನ್ನಷ್ಟು ಕ್ರೂರವೂ, ಕೀಳರಿಮೆಯಿಂದ ನರಳುವವರೂ ಆಗಿದ್ದಾರೆ ಎನ್ನುವುದು ಬಹಳ ಸ್ಪಷ್ಟ. ಇದರ ಪರಿಣಾಮವಾಗಿ ಅತ್ಯಂತ ಕ್ರೂರ ರೀತಿಯ ದಬ್ಬಾಳಿಕೆ, ಕೊಲೆ ಮತ್ತು ನಿರ್ದಯ ಹೆಜ್ಜೆ, ನೋವುಗಳನ್ನು ಕೊಡುವ ಹಂತಕ್ಕೆ ಹೋಗಿರುವ ಗಂಡಿನ ಅಧಿಕಾರಸ್ಥ ಪ್ರಜ್ಞೆಯನ್ನು ಅರಿಯುವ ಸೂಕ್ಷ್ಮತೆಯು ಈ ಕಾದಂಬರಿಯಲ್ಲಿ ಇಲ್ಲವೇ ಇಲ್ಲವಾಗಿದೆ. ಹೆಣ್ಣನ್ನು ಕಾಮದ ಭಾಗವೆಂದೇ ನೋಡುವ ಸಾಂಪ್ರದಾಯಿಕ ಮನೋಭಾವವನ್ನು ಮುಚ್ಚಿಟ್ಟು

ಹೇಳುತ್ತಿದ್ದವೇನೋ ಎನ್ನುವ ಸಂಶಯವು ಈ 'ಕವಲು' ಕಾದಂಬರಿಯಲ್ಲಿಯೂ ಸ್ಪಷ್ಟಗೊಂಡಿರುವುದನ್ನು ಕಾಣಬಹುದು.[೧]

ಒಟ್ಟಿನಲ್ಲಿ ಈ 'ಕವಲು' ಕಾದಂಬರಿಯು ಪಾಶ್ಚಾತ್ಯ ಮಹಿಳೆಯರ ದೃಷ್ಟಿಯಿಂದ ಮಾತ್ರವಲ್ಲದೇ ಭಾರತೀಯ ಮಹಿಳೆಯ ದೃಷ್ಟಿಯಿಂದಲೂ ಪ್ರಮುಖವಾದುದು. ಸಮಾಜಮುಖಿಯಾಗಿರುವ ಅಥವಾ ಚಳವಳಿಯಲ್ಲಿ ತೊಡಗಿರುವ ಯಾವೊಬ್ಬ ಮಹಿಳೆಯು ಒಳ್ಳೆಯವಳಾಗಿ ಕಾಣದೆ ಇರಬಹುದು. ಅಲ್ಲದೇ ಈ ಕಾದಂಬರಿ ಪುರುಷನ ಅಹಂಕಾರದ ಧೋರಣೆಯನ್ನು ಪ್ರತಿಬಿಂಬಿಸುತ್ತದೆ. ಪಾತಾಳಕ್ಕಿಳಿದ ಸೃಜನಶೀಲತೆ ಇಮ್ಮಡಿಯ ದೃಷ್ಟಿಯಿಂದಲೂ ಹಾಸುಹೊಕ್ಕಾಗಿರುವುದನ್ನು ನಾವು ಈ ಕಾದಂಬರಿಯಲ್ಲಿ ಕಾಣಬಹುದು. ಕುಟುಂಬವೆನ್ನುವ ಸಂಸ್ಥೆಯ ಪಾವಿತ್ರ್ಯತೆ ಹಾಗೂ ವ್ಯಕ್ತಿಯ ಆಯ್ಕೆಯ ಪ್ರಶ್ನೆಗಳು ಮುಖಾಮುಖಿಯಾಗುವ ಸಮಸ್ಯೆಯು ಇವರ ವಸ್ತುಗಳಲ್ಲಿ ಪ್ರಧಾನ ಪಾತ್ರವಹಿಸಿದ ಅಂಶವಾಗಿದೆ.

---

೧. ಕೌಟುಂಬಿಕ ಕಟುಸತ್ಯದ ಕಾದಂಬರಿ (ಕನ್ನಡ ಪ್ರಭ ದಿನಪತ್ರಿಕೆ), ಪುಟ ಸಂಖ್ಯೆ ೬, ಭಾನುವಾರ, ೧೮ ಜುಲೈ ೨೦೧೦.

# ಅಧ್ಯಾಯ – ೨

## ಧಾರ್ಮಿಕ ಹಿನ್ನೆಲೆಯಲ್ಲಿ ಮಹಿಳಾ ಚಳವಳಿ

"ವಿಧವೆಯರ ಕಣ್ಣೀರನ್ನು ಒರೆಸದ, ತಬ್ಬಲಿಯ ಗೋಳನ್ನು ಹಿಂಗಿಸದ ಧರ್ಮದಲ್ಲಿ ನನಗೆ ನಂಬಿಕೆಯಿಲ್ಲ" – ಈ ಮಾತು ಶ್ರೀರಾಮಕೃಷ್ಣಪರಮಹಂಸರದು. ಅವರ ಈ ಮಾತುಗಳಲ್ಲಿ ಎರಡು ಮುಖ್ಯ ಸಂಗತಿಗಳಿವೆ. ಅವುಗಳೆಂದರೆ ಮಹಿಳೆ ಮತ್ತು ಧರ್ಮ ಯಾವುದೇ ಧರ್ಮದ ಮೂಲ ಆಶಯ ಮನುಷ್ಯ ಕಲ್ಯಾಣ. ಅಂದರೆ ಒಂದು ಸಮಾಜದಲ್ಲಿ ಆರೋಗ್ಯಕರ ಬದುಕನ್ನು ಕಟ್ಟಿಕೊಳ್ಳಲು ನೆರವಾಗುವುದೇ ಧರ್ಮದ ಕೆಲಸ. ಅದನ್ನು ಬಿಟ್ಟು ಅಪಮಾನ ಸ್ಥಿತಿಯಲ್ಲಿ ಮನುಷ್ಯರನ್ನಿಡುವ ಧರ್ಮ ನಿಜವಾದ ಧರ್ಮವೇ ಅಲ್ಲ. ಜೀವಶಾಸ್ತ್ರೀಯ ಲಕ್ಷಣಗಳನ್ನು ಆಧರಿಸಿ – ಸ್ತ್ರೀಪುರುಷರೆಂದು ಭೇದಭಾವದಿಂದ ವ್ಯತ್ಯಾಸವನ್ನುಂಟು ಮಾಡಿ ಭಾರತೀಯ ಸಮಾಜದಲ್ಲಿ ಮಹಿಳೆಗೆ ಕೆಳದರ್ಜೆಯ ಸ್ಥಾನಮಾನವನ್ನು ನೀಡಿದ್ದು ನಮ್ಮ ಧರ್ಮ ಇದರಿಂದಾಗಿ ಶ್ರೀರಾಮಕೃಷ್ಣಪರಮಹಂಸರು ಹೇಳಿರುವಂತೆ ನಮ್ಮ ಧರ್ಮದ ಬಗ್ಗೆ ನಮಗೆ ಅಪನಂಬಿಕೆಯುಂಟಾಯಿತು. ವಾಸ್ತವವಾಗಿ ಸಮಾಜ ರೂಪುಗೊಳ್ಳುವಲ್ಲಿ ಸ್ತ್ರೀ-ಪುರುಷರಿಬ್ಬರೂ ಪರಸ್ಪರ ಪೂರಕ ಮತ್ತು ಪ್ರೇರಕರು, ಇಬ್ಬರೂ ಸರ್ವಸಮ. ಇಲ್ಲಿ ಯಾರೂ ಮೇಲಲ್ಲ, ಯಾರೂ ಕೀಳಲ್ಲ. ಆದರೆ ಒಂದು ವರ್ಗದ ಮಹಿಳೆಯರು ರೈತಾಪಿ ಮಹಿಳೆಯರಿಗೆ ಈ ಸ್ಥಿತಿಯಿರಲಿಲ್ಲ.

ಧರ್ಮಶಾಸ್ತ್ರಗಳ ಕಾಲದ ಮಹಿಳೆ ಮತ್ತು ಆಕೆಯ ಬದುಕು, ಅಂದಿನ ರೀತಿ ಲಕ್ಷಣಗಳು ಮುಂತಾದ ಅಂಶಗಳನ್ನು ಸೂಕ್ಷ್ಮವಾಗಿ ವಿವೇಚಿಸಬಹುದು. ಕೆಲವು ಸಂದರ್ಭದಲ್ಲಿ ಹಲವರು ವಿದ್ಯಾವತಿಯರಿದ್ದರೂ, ಒಟ್ಟಿನಲ್ಲಿ ಮಹಿಳೆಯರು ಅಜ್ಞಾನಿಗಳಾಗಿದ್ದುದರಿಂದ, ಅವರನ್ನು ಹೀನವರ್ಣದವರ ಸಾಲಿಗೆ ಕೂರಿಸಿ ಆಯಿತು. ಹಿತವಾದ ಧರ್ಮಕಥೆಗಳಿಂದ ಸ್ತ್ರೀಯರ ಧರ್ಮಶ್ರದ್ಧೆ ತಣಿಯಿತು; ಆಶೆ, ಬಯಕೆ ಈಡೇರಿತು. ವೈದಿಕ ವಿದ್ಯೆ ಸಾಲದೆ ಹೋಗಿ, ಧರ್ಮಕಾರ್ಯಗಳಲ್ಲಿ ಈಕೆ ಪತಿಯ ಸಂಗಾತಿನಿಯಾಗುವುದು ಕಡಿಮೆಯಾಗುತ್ತ ಬಂತು.

ಹನ್ನೆರಡನೆಯ ಶತಮಾನ ಭಕ್ತಿಭಂಡಾರಿಗಳಾದ ಬಸವಣ್ಣನವರನ್ನು ಕರ್ನಾಟಕಕ್ಕೆ ದಯಪಾಲಿಸಿ, ಅವರ ಯುಗವೆಂದು ಪ್ರಸಿದ್ಧವಾದದ್ದು; ಬಹುಜನರ ಹಿತದ ಸಲುವಾಗಿ, ಮಹಿಳಾ ಧರ್ಮ ಸಾರ್ವತ್ರಿಕ ಚಳವಳಿಯ ರೂಪು ತಾಳಿತು. ಒಬ್ಬ ದೇವರಲ್ಲಿ

ಭಕ್ತಿಯನ್ನೂ, ದಯಾಧರ್ಮವನ್ನೂ ಜನಜೀವನದಲ್ಲಿ ಹರಡಿ ಲೋಗರ ಬಾಳನ್ನು ತಿದ್ದಿತು. ಬಸವಣ್ಣನವರು ಮಹಿಳೆಯರಿಗೆ ಮತ್ತು ಪುರುಷರಿಗೆ ಹಕ್ಕುಬಾಧ್ಯತೆಗಳನ್ನು ಕಲ್ಪಿಸಿಕೊಟ್ಟರು. ಆದುದರಿಂದ ಅಂದಿನ ಮಹಿಳೆಯರಲ್ಲಿ ಆತ್ಮಗೌರವ, ಧರ್ಮಬುದ್ಧಿ, ವಚನರಚನೆಯ ಕುತೂಹಲ ಹೆಚ್ಚಿದವು. ಮಹಿಳೆಯರು ಸಂಸಾರದಲ್ಲಿದ್ದು ಶರಣಭಾವ ಪಡೆಯುವಂಥವರಾದರು.[೧]

## ೨.೧. ಧರ್ಮ ಮತ್ತು ಮಹಿಳೆ

ಕ್ರಿ.ಪೂ.ಆರನೆಯ ಶತಮಾನದ ಕಾಲಕ್ಕೆ ಧರ್ಮಸೂತ್ರಗಳು ಹಿಂದೂಧರ್ಮದಲ್ಲಿ ಪ್ರವೇಶವಾದವು. ಆ ಕಾಲದ ಪುರೋಹಿತರು ಭಾರತೀಯ ಸಮಾಜವನ್ನು ಒಂದು ವ್ಯವಸ್ಥೆಗೊಳಪಡಿಸಿ ಕೆಲವು ನೀತಿಯನ್ನು ಪ್ರಕಟಿಸಿದರು. ಆ ಸಾಮಾಜಿಕ ನೀತಿಗಳೇ ಧರ್ಮಸೂತ್ರಗಳು ಮತ್ತು ಕಲ್ಪಸೂತ್ರಗಳೆಂದು ಕರೆಯಲ್ಪಟ್ಟವು. ಧರ್ಮಸೂತ್ರಗಳು ಸಾಮಾಜಿಕ ನಿಯಮಗಳನ್ನು ನೀಡಿದವು. ರಾಜಧರ್ಮವನ್ನು ನಿರೂಪಿಸಿದವು. ಮಹಿಳೆಯರ ವಿಷಯದಲ್ಲಿ ಧರ್ಮಸೂತ್ರಗಳು ಆಸ್ತಿಯ ಹಕ್ಕಿಲ್ಲದಂತೆ ಮಾಡಿ ನಿರ್ವಿಣ್ಣರನ್ನಾಗಿಸಿ ಗುಲಾಮಗಿರಿಗೆ ದೂಡಿದವು. ಇಲ್ಲಿಂದ ಮಹಿಳೆಯರಿಗೆ ನಿಯಮಾವಳಿಯಂತೆ ಕಷ್ಟದ ದಿನಗಳು ಆರಂಭವಾದವು.

ಮನುಧರ್ಮಶಾಸ್ತ್ರ ಮಹಿಳೆಯರ ವಿಷಯದಲ್ಲಿ ಆಕೆಯನ್ನು ಹೇಗೆ ಗುಲಾಮಳನ್ನಾಗಿ ಮಾಡಿಕೊಳ್ಳಬೇಕೆಂಬುದು ಪ್ರಧಾನವಾಗಿಟ್ಟುಕೊಂಡಿದೆ. ಆತ ಸ್ಥಾಪಿಸುವ ಅಸಮಾನತೆ ಬ್ರಾಹ್ಮಣ ಹೆಣ್ಣನ್ನೂ ಗುಲಾಮಳಾಗಿಯೇ ನೋಡುವಂತೆ ನಿರ್ದೇಸಿಸುತ್ತದೆ. ಆದ್ದರಿಂದ ಮಹಿಳೆ ಎಲ್ಲಾ ಜಾತಿಯ ಎಲ್ಲಾ ವರ್ಗದಲ್ಲಿಯೂ ಧಾರ್ಮಿಕ, ದಬ್ಬಾಳಿಕೆ ಮತ್ತು ಪುರುಷ ದಬ್ಬಾಳಿಕೆಗೆ ಸಿಕ್ಕಿ ಬೆಂದು ಹೋಗಿದ್ದಾಳೆ. ಉತ್ತಮ ಜಾತಿಯ ಮಹಿಳೆಗೂ ಉಪನಯನವಿಲ್ಲ, ಯಜ್ಞೋಪವೀತವಿಲ್ಲ, ಮಂತ್ರೋಪದೇಶವಿಲ್ಲ ಮತ್ತು ವೇದಾಧ್ಯಯನದ ಅಧಿಕಾರವಿಲ್ಲ. ಆಕೆ ಪಾಪಯೋನಿಜೆ – ಹೀಗೆ ತನ್ನನ್ನೇ ಹಡೆದ, ತನ್ನ ಕೈ ಹಿಡಿದ, ತನ್ನಿಂದಲೇ ಹುಟ್ಟಿದ ಮಹಿಳೆಯನ್ನು ಕೀಳಾಗಿ ಕಂಡ ಧರ್ಮಶಾಸ್ತ್ರ ಗ್ರಂಥ ಈ ಮನುಸ್ಮೃತಿ.

'ದೇವದಾಸಿ' ಪದ್ಧತಿ ಎಂಬುದು ಮಹಿಳೆಯನ್ನು ಧಾರ್ಮಿಕವಾಗಿ ಶೋಷಣೆ ಮಾಡುವ ಒಂದು ಸಂಪ್ರದಾಯ. ಧಾರ್ಮಿಕ ಆವರಣದಲ್ಲಿಯೇ ಮಹಿಳೆಯನ್ನು

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೨೧೩, ಕರ್ತೃ: ಡಾ. ಹಾಲತಿ ಸೋಮಶೇಖರ್.

ಲೈಂಗಿಕ ಕಿರುಕುಳಕ್ಕೆ ಒಡ್ಡುವ ಕ್ರಿಯೆ. ಮಹಿಳೆಯ ಲೈಂಗಿಕ ಸುಲಿಗೆಗೆ ದೇವರು-ಧರ್ಮಗಳ ಪರಸ್ಪರ ಕೈಜೋಡಿಸಿ ನಿಂತಿರುವುದನ್ನು ನಾವು ಕಾಣಬಹುದಾಗಿದೆ. ದೇವದಾಸಿಯರೆಂದರೆ ದೇವಸ್ಥಾನಗಳಿಗೆ ತಮ್ಮನ್ನು ಅರ್ಪಿಸಿಕೊಂಡವರು. ದೇವರೊಂದಿಗೆ ಮದುವೆಯಾದವರು. ಆದ್ದರಿಂದ ಅವರಿಗೆ ಮತ್ತೊಂದು ಮದುವೆಯಿಲ್ಲ. ಯಾವ ಪುರುಷನೂ ಅವರನ್ನು ಮದುವೆಯಾಗುವುದಿಲ್ಲ. ಆದರೆ ಲೈಂಗಿಕ ತೃಪ್ತಿಯನ್ನು ಮಾತ್ರ ಅನುಭವಿಸುತ್ತಾನೆ. ದೇವಸ್ಥಾನಗಳಲ್ಲಿ ದೇವರಿಗೆ ಆನಂದ ಉಂಟಾಗುವಂತೆ ನರ್ತನ ಮಾಡುತ್ತಾ, ಹಾಡುತ್ತಾ ಜೀವನ ಸವೆಸುವ ಈ ದೇವತೆಯರನ್ನು ಭೋಗಿಸುವವರು ಮಾತ್ರ ಭೂಲೋಕದ ದೇವತೆಗಳು, ಅವರೆಂದರೆ ಪುರೋಹಿತರು. ಅರ್ಚಕರು, ರಾಜರುಗಳು, ಜಮೀನುದಾರರು ಮತ್ತು ಶ್ರೀಮಂತರು. ಧಾರ್ಮಿಕ ಅನುಮತಿಯೊಂದಿಗೆ ದೇವದಾಸಿಯರಾಗಿ 'ಭೂಲೋಕದ ಪುರುಷ ಶ್ರೇಷ್ಠ'ರನ್ನು ಲೈಂಗಿಕ ತೃಪ್ತಿಪಡಿಸಲು ವೇಶ್ಯೆಯರನ್ನಾಗಿ ಮಾರ್ಪಡಿಸುವ ಒಂದು ಕೆಟ್ಟ ಸಂಪ್ರದಾಯ ಈ ದೇವದಾಸಿ ಪದ್ಧತಿ.[೧]

ದೇವದಾಸಿ ಪದ್ಧತಿ ಒಂದು ರೀತಿಯ ಅನಿಷ್ಟ ಪದ್ಧತಿ. ಬಹುಮಟ್ಟಿಗೆ ಕೆಳಜಾತಿಯ ಜನ ಇಂಥ ಪಾಪಕಾರ್ಯಕ್ಕೆ ಬಲಿಯಾಗಿದ್ದಾರೆ. ಮೈಮಾರಿಕೊಂಡು ಬದುಕು ನೂಕುವಂತೆ ಪ್ರೇರೇಪಿಸುವ ಧಾರ್ಮಿಕ ಒತ್ತಡದಿಂದಾಗಿ ಅನಕ್ಷರಸ್ಥ ಜನ ಸಮುದಾಯ ಅತ್ಯಂತ ಸುಲಭವಾಗಿ ಶೋಷಣೆಗೆ ಬಲಿಯಾಗುತ್ತಿದೆ. ಇಂಥ ಕಾರ್ಯಕ್ಕೆ ತಮ್ಮನ್ನೂ ತಾವು ಸ್ವಇಚ್ಛೆಯಿಂದಲೇ ಸಮರ್ಪಿಸಿಕೊಳ್ಳುವಂತೆ ಪ್ರಲೋಭನೆಗಳನ್ನು ನೀಡುವುದರ ಜತೆಗೆ ಧಾರ್ಮಿಕ ಬೆದರಿಕೆಯೂ ದೇವದಾಸಿಯರನ್ನಾಗಿ ಮಾಡುತ್ತಿದೆ. ಆದ್ದರಿಂದ ಈ ದೇವದಾಸಿ ಪದ್ಧತಿ ಕೆಲವು ಕಡೆ ಈಗಲೂ ಜೀವಂತವಾಗಿರುವುದನ್ನು ನಾವು ಗುರುತಿಸಬಹುದು.

ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಧಾರ್ಮಿಕ ಸಂಸ್ಕಾರಕ್ಕೆ ಅವಕಾಶ ನೀಡಿ ಅನುಭವ ಮಂಟಪದಲ್ಲಿ ಶೂದ್ರರು, ಅಂತ್ಯಜರು ಮತ್ತು ಮಹಿಳೆಯರು ಪಾಲ್ಗೊಂಡು ಹೊಸದಾದ ಧರ್ಮವನ್ನು ಕಂಡುಕೊಂಡ ಕಾಲಘಟ್ಟ ಅದು. ಅನ್ನ, ಅರಿವೆ, ಆಶ್ರಯಗಳಿಲ್ಲದ ಮಹಿಳೆಯರನ್ನು ದೇವರು ಧರ್ಮದ ಹೆಸರಿನಲ್ಲಿ ದೇವದಾಸಿಯರನ್ನಾಗಿ ಮಾಡಿ ವೇಶ್ಯೆಯರನ್ನಾಗಿಸಿ ಕಾಮಾಂಧರಾದ ಪುರುಷರು

೧. ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ, ಪುಟ ಸಂಖ್ಯೆ – ೨೧೬, ಕರ್ತೃ: ಸಾರಾ ಅಬೂಬುಕರ್.

ನಿರಂತರ ಅತ್ಯಾಚಾರಕ್ಕೆ ವ್ಯವಸ್ಥಿತ ಸಂಚುಮಾಡಿಕೊಂಡು ಶೋಷಣೆ ಮಾಡಿದ್ದು ಅತ್ಯಂತ ಅಮಾನವೀಯವಾದದ್ದು.

ಧರ್ಮದ ಅನುಕೂಲತೆಗಳನ್ನು ಪಡೆಯುವವರು ಕೆಲವೇ ಮಂದಿ. ಬಹುಮಂದಿ ಧರ್ಮದ ಅತಿಕ್ರಮಣಕ್ಕೆ ಗುರಿಯಾಗುತ್ತಾರೆ. ಇದು ಲೋಕಸತ್ಯ. ಮಹಿಳೆಯನ್ನು ದೇವತೆ ಮಾಡಿ ದೇವರಿಗೆ ಅರ್ಪಿಸುವ ನಾಟಕವಾಡಿ, ದೈವಾಂಶಸಂಭೂತನಾದ ಪುರುಷ ನಿರಂತರವಾಗಿ ಧಾರ್ಮಿಕ ವ್ಯವಸ್ಥೆಯಲ್ಲಿ ತನಗೆ ದಾಸಿಯನ್ನಾಗಿಸಿಕೊಂಡಿರುವುದು ದೇವದಾಸಿ ಪದ್ಧತಿಯ ಮತ್ತೊಂದು ಕ್ರೌರ್ಯ. ದೇವಪೂಜೆಗೆ ಸಲ್ಲುವ ನಾರಿ ಲೈಂಗಿಕ ಶೋಷಣೆಗೆ ಒಳಗಾಗುವುದು. ಅಲ್ಲದೆ ಪುರುಷ ಸಮಾಜ ತನ್ನ ಅನಿರ್ಬಂಧಿತ ಕಾಮುಕತನಕ್ಕೆ ಸ್ವೇಚ್ಛಾಚಾರಿಯಾಗಿ ಮಹಿಳೆಯನ್ನು ಊರ ಬಸವಿ ಮಾಡಿ, ಯಾರು ಬೇಕಾದರೂ ಬಳಸಬಹುದಾದ ಸ್ಥಿತಿಗೆ ತಳ್ಳಿ ಸಂತೋಷಪಟ್ಟಿರುವುದನ್ನು ಇತಿಹಾಸದಲ್ಲಿ ಕಾಣುತ್ತೇವೆ.

ದೇವರ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ನಮ್ಮ ಮಹಿಳೆಯರ ಮೇಲೆ ನಡೆಯುವಷ್ಟು ದೌರ್ಜನ್ಯ ಬೇರೆ ಯಾವ ವಿಷಯದಲ್ಲೂ ನಡೆಯುವುದಿಲ್ಲವೇನೊ ಮುಸ್ಲಿಂ ಪುರುಷರು ಧರ್ಮದ ಹೆಸರಿನಲ್ಲಿ ಮಹಿಳೆಯರನ್ನು ಹೇಗೆ ವಂಚಿಸುತ್ತಲೇ ಬಂದಿದ್ದಾರೆ ಎಂಬುದನ್ನು ಈಗಲಾದರೂ ಮಹಿಳೆಯರು ಮನವರಿಕೆ ಮಾಡಿಕೊಳ್ಳಬೇಕಾಗಿದೆ. ಮಹಿಳೆಯರಿಗೆ ಸಮನಾದ ಶಿಕ್ಷಣ ನೀಡದೆ, ಧಾರ್ಮಿಕವಾಗಿಯೂ ಅವರನ್ನು ಅಜ್ಞಾನಿಗಳಾಗಿಸಿ, ಅವರನ್ನು ನಾಲ್ಕು ಗೋಡೆಗಳೊಳಗೆ ಬಂಧಿಸಿಟ್ಟು, ಪುರುಷರು ಎಸಗುವ ಎಲ್ಲ ಅಪರಾಧಗಳನ್ನೂ ಮಹಿಳೆಯರ ತಲೆಗೆ ಕಟ್ಟಿ ಅವರಿಗೆ ಶಿಕ್ಷೆ ನೀಡುವ ಪರಿಪಾಠ ಇಂದು ನಿನ್ನೆಯದಲ್ಲ. ಸಂವಿಧಾನ ಪ್ರತಿಯೊಬ್ಬ ಮಹಿಳೆಯ ಧಾರ್ಮಿಕ ಸ್ವಾತಂತ್ರ್ಯವನ್ನೂ ಎತ್ತಿಹಿಡಿಯುತ್ತದೆ. ಧಾರ್ಮಿಕ ಸ್ವಾತಂತ್ರ್ಯದ ಈ ಅವಕಾಶದಿಂದಾಗಿ ಮಹಿಳೆಯರಿಗೆ ಸಂವಿಧಾನ ನೀಡಿದ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಸಮಾಜವು ಧರ್ಮದ ಹೆಸರಿನಲ್ಲಿ ಕಿತ್ತುಕೊಳ್ಳುತ್ತದೆ. ಮಹಿಳಾ ಸ್ವಾತಂತ್ರ್ಯ, ಸಮಾನತೆ, ಸ್ತ್ರೀವಾದ ಮುಂತಾದ ಪದಗಳೆಲ್ಲವೂ ಧಾರ್ಮಿಕ ಸ್ವಾತಂತ್ರ್ಯ ಹಾಗೂ ಪ್ರತ್ಯೇಕ ವ್ಯಕ್ತಿನಿಯಮದ ಅಡಿಯಲ್ಲಿ ಹೂತುಹೋಗುತ್ತವೆ.

ಧಾರ್ಮಿಕ ನಿಯಮಗಳೆಲ್ಲವೂ ಮಹಿಳೆಯ ಶೋಷಣೆಗಾಗಿಯೇ ರೂಪಿಸಲ್ಪಟ್ಟಿವೆ. ಹಲವು ಅಧಾರ್ಮಿಕ ನಿಯಮಗಳನ್ನು ವ್ಯಕ್ತಿನಿಯಮದ ಹೆಸರಿನಲ್ಲಿ ಮಹಿಳೆಯರ ಮೇಲೆ ಹೇರಿ ಆಕೆ ಸಮಾಜದಲ್ಲಿ ಘನತೆ, ಗೌರವದಿಂದ ಬದುಕು ಸಾಗಿಸಲಾಗದಂತೆ

ಮಾಡಲಾಗುತ್ತಿದೆ. ಇಂತಹ ಅರ್ಥವಿಲ್ಲದ ಅಧಾರ್ಮಿಕ ನಿಯಮಗಳನ್ನು ಕೈಬಿಟ್ಟು ಧರ್ಮದ ನಿಯಮಗಳ ಅಡಿಯಲ್ಲಿ ಮಹಿಳೆಯರ ಬದುಕು ಸಹನೀಯ ಆಗುವಂತಹ ಹೊಸ ವ್ಯಕ್ತಿ ನಿಯಮದ ಯೋಜನೆ ರೂಪಿಸಲ್ಪಡುವುದೇ ಇಂತಹ ಶೋಷಣೆಗೆ ಪರಿಹಾರದ ಮಾರ್ಗವಾಗಿದೆ. ಭಾರತದ ಸಂವಿಧಾನ ಮತ್ತು ಪ್ರಜಾಸತ್ತೆಗೆ ಜಾಗತಿಕ ಮನ್ನಣೆ ಇದ್ದರೂ ಇಂತಹ ವೈರುಧ್ಯಗಳಿಂದಾಗಿ ಈ ಮನ್ನಣೆಯು ಮಸುಕಾಗಿದೆ. ಸ್ತ್ರೀ–ಪುರುಷರಲ್ಲಿ ಮಾತ್ರವಲ್ಲ, ಈ ದೇಶದ ಮಹಿಳೆಯರಲ್ಲೇ ಸಮಾನತೆ ಇಲ್ಲವೆಂಬುದು ಇದರಿಂದ ವ್ಯಕ್ತವಾಗುತ್ತದೆ.[೧]

### ೨.೨. ಪುರುಷ ಶ್ರೇಷ್ಠತೆಯನ್ನು ಸಾರಿದ ಜೈನಧರ್ಮ

ಕ್ರಿ.ಪೂ. ಸು. ೨೦೦ರಲ್ಲಿ ವೈದಿಕ ಧರ್ಮಕ್ಕೆ ಭಿನ್ನವಾದ ಹಲವು ವಿಚಾರದಲ್ಲಿ ವೈದಿಕ ಧರ್ಮವನ್ನೂ ಹೋಲುವ ಜೈನಧರ್ಮ ಉದಯಿಸಿತು. ಎಲ್ಲಾ ಧರ್ಮಗಳ ಮೂಲಭೂತ ಆಶಯದಂತೆ ಜೈನಧರ್ಮವೂ ಮನುಷ್ಯನ ಬದುಕನ್ನು ಉತ್ತಮಗೊಳಿಸಲು ಅಪೇಕ್ಷಿಸುತ್ತದೆ. ಇಂಥ ಧರ್ಮದಲ್ಲಿ ಮಹಿಳೆಯನ್ನು ಪುರುಷ ಸಮಾನವಾಗಿ ಪರಿಗಣಿಸುವುದು ಕಂಡುಬರುವುದಿಲ್ಲ. ಆತ್ಮ, ಪರಮಾತ್ಮ, ಮೋಕ್ಷ ಮುಂತಾದವುಗಳ ಬಗ್ಗೆ ನಂಬಿಕೆಯಿಟ್ಟಿರುವ ಜೈನಧರ್ಮ ಮಹಿಳೆಯರಿಗೆ ಮೋಕ್ಷವಿಲ್ಲ ಎಂದು ಹೇಳುತ್ತದೆ. ಮಹಿಳೆಯಾದವಳು ಮುಂದಿನ ಜನ್ಮದಲ್ಲಿ ಪುರುಷನಾಗಿ ಹುಟ್ಟಿಯೇ ಮೋಕ್ಷ ಗಳಿಸಬೇಕು ಎಂಬುದು ದಿಗಂಬರರ ಅಭಿಪ್ರಾಯ. ಮಹಿಳೆಯರಿಗೆ ದಿಗಂಬರರಾಗಲು ಅನುಮತಿಯಿಲ್ಲ. ಹೀಗಾಗಿ ಇಪ್ಪತ್ತುನಾಲ್ಕು ಜನ ತೀರ್ಥಂಕರರಲ್ಲಿ ಒಬ್ಬರೂ ಮಹಿಳೆಯರಿಲ್ಲ. ಜೈನಧರ್ಮದಲ್ಲಿ ಮಹಿಳೆಯರಿಗೆ ವಿದ್ಯೆ ಕಲಿಯಲು, ಜೈನ ಸನ್ಯಾಸಿಗಳಾಗಲು ಅವಕಾಶವಿದೆ. ಜೈನಧರ್ಮ ಪ್ರಚಾರಕ್ಕೆ ಪ್ರವಾಸ ಮಾಡುವ ಮಹಿಳೆಯರನ್ನು ಪ್ರವರ್ತಿಯರೆಂದು ಕರೆಯುತ್ತಿದ್ದರಿಂದ ಮಹಿಳೆಯರಿಗೂ ಧಾರ್ಮಿಕ ಸ್ವಾತಂತ್ರ್ಯವಿರುವುದು ಜೈನಧರ್ಮದಲ್ಲಿ ಕಂಡುಬರುತ್ತದೆ.

ಜೈನಧರ್ಮಕ್ಕೆ ಸೇರುವ ಮಹಿಳೆಯರಿಗೆ ಯಾವುದೇ ನಿರ್ಬಂಧವಿಲ್ಲದೆ ತಮ್ಮ ಗಂಡಂದಿರನ್ನು ತ್ಯಜಿಸಿ ಜೈನ ಬಸದಿಗಳಿಗೆ ಮಹಿಳೆಯರು ಸೇರುತ್ತಿದ್ದರು. ಕೌಶಾಂಬಿಯ ರಾಜಕುಮಾರಿ ಜಯಂತಿಯು ಸ್ವತಃ ಮಹಾವೀರನ ಜೊತೆ ಜೈನಧರ್ಮದ ಮೂಲತತ್ವಗಳ ಬಗ್ಗೆ ಚರ್ಚಿಸಿ ತನ್ನ ಸಂಶಯಗಳನ್ನು ಪರಿಹರಿಸಿಕೊಂಡು ತನ್ನೆಲ್ಲಾ

---

೧. ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ, ಪುಟ ಸಂಖ್ಯೆ ೨೧೬–೧೮, ಕರ್ತೃ: ಸಾರಾ ಅಬೂಬುಕರ್.

ರಾಣಿ ವೈಭವವನ್ನೂ ತೊರೆದು ಜೈನಳಾಗಿ ತನ್ನ ವಿಲಾಸ ಜೀವನವನ್ನು ತ್ಯಜಿಸಿ ಕಠಿಣ ವ್ರತಗಳನ್ನು ಕೈಗೊಂಡಳೆಂಬ ಕಥೆ ಬರುವುದರಿಂದ ಮಹಿಳೆಯರು ಪುರುಷರೊಂದಿಗೆ ವಾಗ್ವಾದ ನಡೆಸುವ ಅವಕಾಶವಿರುವುದು, ಮೋಕ್ಷ ಸಾಧನೆಗಾಗಿ ಮಹಿಳೆಯರು ಕಠಿಣ ತಪಸ್ಸನ್ನಾಚರಿಸುವುದು ಕಂಡುಬರುವುದರಿಂದ ಮಹಿಳೆಯರಿಗೆ ಧಾರ್ಮಿಕ ಸ್ವಾತಂತ್ರ್ಯವಿರುವುದು ಸ್ಪಷ್ಟವಾಗುತ್ತದೆ.

ಪುರುಷರ ಕಾಮುಕತನಕ್ಕೆ ಬಲಿಯಾದ ಅನೇಕ ಕಂತಿಯರನ್ನು ಉದಾರವಾಗಿ ನೋಡುವಂತೆ ಜೈನಧರ್ಮ ಬೋಧಿಸುತ್ತಿತ್ತು. ಇದರಿಂದಾಗಿ ಸಮಾಜಘಾತುಕ ಪುರುಷರಿಗೆ ಬಲಿಯಾಗಿ ಗರ್ಭಿಣಿಯರಾದಂತಹ ಮಹಿಳೆಯರನ್ನು ಆಶ್ರಮದಲ್ಲಿಟ್ಟುಕೊಂಡು ರಕ್ಷಿಸುತ್ತಿದ್ದರು ಮತ್ತು ಅವರು ನಿರಾಪರಾಧಿಗಳಾದ್ದರಿಂದ ದೂಷಿಸುತ್ತಿರಲಿಲ್ಲ. ಈ ವಿಷಯದಲ್ಲಿ ಇಂದಿಗೂ ಮಹಿಳೆಗೆ ತನ್ನದಲ್ಲದ ತಪ್ಪಿಗೆ ಬರುವ ಆರೋಪಗಳು ಮಹಿಳೆಯನ್ನು ಹಿಂಸೆಗೊಳಪಡಿಸುವುದನ್ನು ನೋಡಿದರೆ ಜೈನ-ಧರ್ಮದಲ್ಲಿನ ಮಹಿಳೆಯ ಸ್ಥಿತಿಗತಿ ಉತ್ತಮವೇ ಆಗಿತ್ತೆಂದು ಹೇಳಬಹುದು. ಜೈನಧರ್ಮದಲ್ಲಿ ಮಹಿಳೆಯನ್ನು ಉನ್ನತವಾಗಿ ಚಿತ್ರಿಸುವುದು ಕಂಡುಬರುವುದಿಲ್ಲ. ಜೈನ ಮುನಿಗಳಿಂದ ರಚಿತವಾದ ಸಾಹಿತ್ಯದಲ್ಲಿಯೂ ಮಹಿಳೆಯರನ್ನು ನಾರಿ, ಅಂಗನಾ, ವನಿತಾ, ರಮಾ ಎಂಬುದಾಗಿ ಕರೆಯುತ್ತಾ ಪುರುಷನಿಗಿಂತಲೂ ಹೀನಾಯವಾಗಿ ಚಿತ್ರಿಸಿದ್ದಾರೆ. ಅಲ್ಲದೆ ಪುರುಷನಿಗೆ ನಾರಿಗಿಂತ ದೊಡ್ಡ ವೈರಿ ಇಲ್ಲವೆಂದೇ ಹೇಳಲಾಗಿದೆ. ಸ್ತ್ರೀ-ಪುರುಷರ ಸಮಾನತೆಯ ಬಗ್ಗೆ ಮಾತನಾಡುತ್ತಿರುವ ಈ ಹೊತ್ತಿನಲ್ಲಿ ಯಾವಾಗಲೂ ಪುರುಷನ ದೇಹಕ್ಕೆ ಆಸೆ ಪಡುವವಳು ಮಹಿಳೆ, ವಿಲಾಸಿ ಜೀವನದಲ್ಲಿ ಲೋಲುಪಳು, ಪುರುಷನ ಅಧಃಪತನಕ್ಕೆ ಕಾರಣಳು ಎಂದು ಹೇಳುವ ಜೈನಧರ್ಮದ ಬಗ್ಗೆ ಅನಾದರ ಉಂಟಾಗುತ್ತದೆ. ವೈದಿಕ ಧರ್ಮದ ಅನೇಕ ತತ್ವಗಳನ್ನು ಅಳವಡಿಸಿಕೊಂಡಿರುವ ಜೈನಧರ್ಮ ಆಳದಲ್ಲಿ ಸ್ತ್ರೀ ವಿರೋಧಿ ನಿಲುವನ್ನೇ ಹೊಂದಿರುವುದು.

ಜೈನಧರ್ಮವು ಮಹಿಳೆಯರಿಗೆ ತಮ್ಮ ಬದುಕಿನ ವಿಚಾರಕ್ಕೆ ಕೆಲವು ಅಧಿಕಾರಗಳನ್ನು ನೀಡಿರುವುದು ಕಂಡುಬರುತ್ತದೆ. ಅದೆಂದರೆ ಕುಟುಂಬದಲ್ಲಿ ಮಹಿಳೆಯರು ಪುರುಷನಿಗೆ ಸಮಾನವಾದ ಅಧಿಕಾರವನ್ನು ಹೊಂದಿದ್ದು, ಮಕ್ಕಳಿಲ್ಲದಿದ್ದಲ್ಲಿ ದತ್ತು ತೆಗೆದುಕೊಳ್ಳುವ ಅಧಿಕಾರ ಪಿತ್ರಾರ್ಜಿತ ಆಸ್ತಿಯನ್ನು ಸ್ತ್ರೀಯರಿಗೂ ಹಂಚುವ ಅವಕಾಶ, ವಿಧವೆಯಾದರೆ ಗಂಡನ ಸಮಸ್ತ ಆಸ್ತಿಯ ಒಡೆತನದ ಹಕ್ಕು ಸ್ತ್ರೀಯರಿಗಿದ್ದವು. ಆದ್ದರಿಂದ ವೈದಿಕ ಧರ್ಮಕ್ಕಿಂತ ಗೌರವಯುತ

ಸ್ಥಾನವನ್ನು ಜೈನಧರ್ಮವು ಮಹಿಳೆಯರಿಗೆ ನೀಡಿದೆ ಎನ್ನಬಹುದು. ಜೈನ ಸಿದ್ಧಾಂತ ಲೋಕ ಅನಾದಿ, ಜೀವ ಅನಾದಿಕರ್ಮ ಅನಾದಿ ಎನ್ನುತ್ತದೆ. ಮಹಿಳೆಯರು ಮುಕ್ತಾತ್ಮರಾಗುವಂತೆಯೇ ಇಲ್ಲ. ಇದರಿಂದಾಗಿ ಸ್ತ್ರೀ ಸಮಾನತೆಗೆ ಧಾರ್ಮಿಕ ಸ್ಪಂದನವಿಲ್ಲ ಜೈನಧರ್ಮದಲ್ಲಿ. ಈ ಧರ್ಮ ವೈರಾಗ್ಯವನ್ನೇ ಪ್ರಧಾನವಾಗಿ ಪೋಷಿಸುವಂತಹದ್ದು. ಆದ್ದರಿಂದ ಸಾಂಸಾರಿಕ ಬದುಕಿನಲ್ಲಿ ಮೋಕ್ಷ ಸಾಧನೆ ಸಾಧ್ಯವಿಲ್ಲ ಎಂದು ನಂಬಿದ ಧರ್ಮವಿದು. ಪುರುಷನ ವಿಶಿಷ್ಟ ಆಕರ್ಷಣೆಯಾದ ಮಹಿಳೆಯನ್ನು ಉನ್ನತವಾಗಿ ನೋಡುವುದು ಜೈನಧರ್ಮೀಯರಿಗೆ ಸಾಧ್ಯವಿಲ್ಲ. ಏಕೆಂದರೆ ಜೈನಯತಿಗೆ ಮಹಿಳೆ ವ್ರತಭಂಗಮಾಡುವವಳು ಎಂದು ಭಾವಿಸಿದಂತಿದೆ.

ಜೈನಧರ್ಮದ ಮೂಲಮಂತ್ರವೇ ಅಹಿಂಸೆ. "ಅಹಿಂಸಾ ಪರಮೋ ಧರ್ಮ: ಹಿಂಸಾಚಾತ್ಮ ಪ್ರಪೀಡನಂ" ಎಂದು ಮನುಷ್ಯ ಮಾತ್ರವಲ್ಲ ಪ್ರಾಣಿಗಳಿಗೂ ಹಿಂಸೆ ಮಾಡಬಾರದು ಎಂಬ ಸದಾಚಾರವನ್ನು ಹೇಳಿದ ಧರ್ಮ, ಅಹಿಂಸೆಯಿಂದಲೇ ಶಾಂತಿ, ಸುಖ, ಸೌಭಾಗ್ಯಗಳು ದೊರೆಯುತ್ತವೆಯೆಂದು ಜೈನಧರ್ಮ ಸಾರುವುದರಿಂದ ಮಹಿಳೆಯನ್ನು ಹಿಂಸಿಸಿರುವುದು, ಹೀಯಾಳಿಸಿರುವುದು, ಶಿಕ್ಷಿಸಿರುವುದು, ಅಮಾನವೀಯವಾಗಿ ನಡೆಸಿಕೊಂಡಿರುವುದು ಜೈನಧರ್ಮದಲ್ಲಿಲ್ಲ. ಸ್ಫುರದ್ರೂಪಿಯಾದ ಮಹಿಳೆಯನ್ನು ಕಂಡರೆ ಮನೋವಿಕಾರವಾಗಲಿ, ಅಂಗವಿಕಾರವಾಗಲಿ ದಿಗಂಬರ ಸನ್ಯಾಸಿಗೆ ಉಂಟಾದಲ್ಲಿ ಅವರು ಉಪವಾಸ ಮಾಡುವರು; ಪ್ರಾರ್ಥನೆ, ಧ್ಯಾನದಲ್ಲಿ ದಿನ ಕಳೆಯುವರು ಎಂದು ಜೈನಧರ್ಮದಲ್ಲಿ ಹೇಳಿರುವುದರಿಂದ ಮಹಿಳೆ ಚಿತ್ತವಿಕಾರಕ್ಕೊಳಗು ಮಾಡುವವಳು ಎಂದು ಭಾವಿಸಿದಂತಿದೆ.[೧]

ಜೈನಧರ್ಮದಲ್ಲಿ ಪುರುಷನಿಗೆ ಶ್ರೇಷ್ಠತೆಯನ್ನು ಪ್ರತಿಪಾದಿಸುವುದರಿಂದ ಸ್ತ್ರೀಯರು ಹೀನಸ್ಥಿತಿಗೆ, ಅಪಮಾನಕ್ಕೆ ಒಳಗಾಗಿದ್ದಾರೆ. ನಿತ್ಯದ ಬದುಕಿನಲ್ಲಿಯೂ ಮಹಿಳೆ ಲೈಂಗಿಕ ಭೋಗಕ್ಕಿರುವವಳು. ಅವಳನ್ನು ಕಣ್ಣಿನಿಂದ ನೋಡಿದರೆ ಚಿತ್ತ ಚಂಚಲವಾಗುವುದು, ಮಹಿಳೆ ವೈರಾಗ್ಯಕ್ಕಿರುವ ಅಡ್ಡಿ ಎಂದು ಜೈನಧರ್ಮ ಹೇಳಿರುವುದರಿಂದ ಮಹಿಳೆ ಮಾನಸಿಕವಾಗಿ ಸಾಮಾಜಿಕವಾಗಿ ಹಿಂಸೆಯನ್ನೇ ಅನುಭವಿಸಿದ್ದಾಳೆ. ಮಾನಸಿಕ ಖಿನ್ನತೆ, ಕೀಳರಿಮೆಯಲ್ಲಿ ನರಳಿರುವ ಮಹಿಳೆ ವೈಯಕ್ತಿಕ ಸ್ವಾತಂತ್ರ್ಯ ಅನುಭವಿಸುವುದು ಸಾಧ್ಯವಾಗದ ಮಾತು. ಆದ್ದರಿಂದ ಜೈನಧರ್ಮವೂ ಮಹಿಳೆಯನ್ನು ಕಾಣುವುದು ಎರಡನೆಯ ದರ್ಜೆಯವಳೆಂದೆ.

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೩೧–೩೫,
ಕರ್ತೃ: ಡಾ. ಹಾಲತಿ ಸೋಮಶೇಖರ್.

## ೨.೩. ಬೌದ್ಧಧರ್ಮದಲ್ಲಿ ಮಹಿಳೆಯ ಚಿತ್ರಣ

ಪುರುಷ ಬದುಕಿನಲ್ಲಿ ಮಹಿಳೆಯ ಪ್ರಾಧಾನ್ಯತೆ ಎಷ್ಟೆಂದು ಸರ್ವಜ್ಞನ ವಚನವೊಂದರಲ್ಲಿ ನಾವು ಕಾಣಬಹುದು. ಸರ್ವಜ್ಞ ಮಹಿಳೆಯನ್ನು ಹೀಗೆ ಪರಿಭಾವಿಸಿರುವುದನ್ನು ನೋಡಿದರೆ ಅವನೆಂಥ ಲೋಕಜ್ಞಾನಿ ಎಂಬುದು ಸ್ಪಷ್ಟವಾಗುತ್ತದೆ. ಒಂದರ್ಥದಲ್ಲಿ ನಮ್ಮೆಲ್ಲ ಆಸೆ-ಆಕಾಂಕ್ಷೆಗಳು ಮಹಿಳೆಯ ಸುತ್ತಲೇ ಸುತ್ತುತ್ತಿರುತ್ತವೆ. ಇಂಥ ಮಹಿಳೆಯನ್ನು ಜಗತ್ತಿಗೆ ಮಾನವಧರ್ಮವನ್ನು; ಮನುಷ್ಯ ಪ್ರೀತಿಯನ್ನು ತಿಳಿಸಿಕೊಟ್ಟ ಬುದ್ಧ ಭಾವಿಸಿದ್ದು ಬೇರೆ ರೀತಿಯಲ್ಲಿ. ಆತನು ಮಹಿಳೆ ಹೆಚ್ಚಿನ ಜ್ಞಾನಾರ್ಜನೆಗೆ, ತಪಸ್ಸಿಗೆ ಅಡ್ಡಿಯೆಂದೇ ನಂಬಿದ್ದವನು. ಬ್ರಹ್ಮಚರ್ಯ ಸಂಸಾರ ಜೀವನಕ್ಕಿಂತ ಕಠಿಣ ಮತ್ತು ಶ್ರೇಷ್ಠವೆಂದು ಭಾವಿಸಿದ್ದ ಬುದ್ಧ ಮದುವೆಯಾದ ಒಂದು ವರ್ಷದಲ್ಲಿ ಹೆಂಡತಿಯನ್ನು ಮತ್ತು ಆಗತಾನೆ ಹುಟ್ಟಿದ ಮಗುವನ್ನು ತೊರೆದವನು. ಮಹಿಳೆಯ ಬಗ್ಗೆ ಬುದ್ಧ ತುಂಬಾ ಉದಾರಿಯಾಗಿರಲಿಲ್ಲ ಎಂಬುದು ಬೌದ್ಧ ಧರ್ಮದಲ್ಲಿಯೇ ಬರುವ ಒಂದು ನಿದರ್ಶನದಿಂದ ತಿಳಿಯುತ್ತದೆ.

ಜಗತ್ತಿಗೆ ನ್ಯಾಯ, ನೀತಿ, ಧರ್ಮಗಳನ್ನು ಹೇಳಿದ ಬುದ್ಧ ಮಹಿಳೆಯ ವಿಷಯದಲ್ಲಿ ಹೊಂದಿದ್ದ ಅಭಿಪ್ರಾಯ ಅನೀತಿಯಾಗಿತ್ತು. ಭಿಕ್ಷುಕಿಯರ ಸಂಘವನ್ನು ಸ್ಥಾಪಿಸಲು ಬುದ್ಧನಿಗೆ ಒಲವಿರಲಿಲ್ಲವಂತೆ. ಸ್ವತಃ ಬುದ್ಧನ ಸಾಕು ತಾಯಿಯಾದ ಮಹಾಪ್ರಜಾವತಿಯು ತನ್ನನ್ನು ಭಿಕ್ಷುಕಿಯನ್ನಾಗಿ ಸ್ವೀಕರಿಸುವಂತೆ ಕೇಳಿಕೊಂಡಾಗ ಬುದ್ಧ ನಿಷ್ಠುರನಾಗಿ ನಿರಾಕರಿಸಿದನಂತೆ. ಪ್ರಜಾವತಿಯು ಅಷ್ಟಕ್ಕೆ ಸುಮ್ಮನಾಗಲಿಲ್ಲ. ಬುದ್ಧನ ಆಪ್ತಮಿತ್ರನಾದ ಆನಂದನ ಬಳಿ ತನ್ನ ಬಯಕೆಯನ್ನು ತೋಡಿಕೊಂಡಳಂತೆ. ಆನಂದನು ಆಕೆಯ ಪರವಾಗಿ ಬುದ್ಧನಿಗೆ ತನ್ನ ತಾಯಿಯನ್ನು ಬೌದ್ಧ ಭಿಕ್ಷುಕಿಯಾಗಿಸಲು ಕೇಳಿಕೊಂಡರೆ ಬುದ್ಧ ನಿರ್ದಾಕ್ಷಿಣ್ಯವಾಗಿ ನಿರಾಕರಿಸಿದನಂತೆ. ಆಗ ಬುದ್ಧನೊಂದಿಗೆ ವಾದಿಸಿದ ಆನಂದ ಹೆಣ್ಣು ಮಕ್ಕಳು ನಿರ್ವಾಣವನ್ನು ಹೊಂದಲು ಶಕ್ತರೆಂದು ಒಮ್ಮೆ ಹೇಳಿ ಈಗ ಭಿಕ್ಷುವಾಗುವುದಕ್ಕೆ ಅವಕಾಶ ನೀಡದಿರುವುದು ಹೆಣ್ಣೆಂಬ ಕಾರಣಕ್ಕೆ ಹೀಗೆ ಹೇಳುವುದೇ - ನೀವು ನಿಮಗೆ ಉಣ್ಣಿಸಿ, ತಿನ್ನಿಸಿ ದೊಡ್ಡವನನ್ನಾಗಿ ಮಾಡಿದವಳನ್ನು ಬೌದ್ಧಧರ್ಮಕ್ಕೆ ಸೇರುವುದನ್ನು ನಿರಾಕರಿಸುವುದು ಯೋಗ್ಯವೇ? ಎಂದು ಕೇಳಿದಾಗ ಬುದ್ಧ ಅನಿವಾರ್ಯವಾಗಿ ಒಪ್ಪಿಕೊಂಡನಂತೆ. ಆದರೂ ಒಂದು ಎಚ್ಚರಿಕೆಯನ್ನು ನೀಡಿದನಂತೆ.

ಬೌದ್ಧಧರ್ಮವು ಮಹಿಳೆಯರಿಗೆ ಕೆಲವು ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿದೆ. ಮಹಿಳೆ ವಿವಾಹಿತಳಾಗಿರಲಿ, ಅವಿವಾಹಿತಳಾಗಿರಲಿ ಬೌದ್ಧದೀಕ್ಷೆ ಪಡೆದು ಭಿಕ್ಷುಕಿಯಾಗಿ ಸ್ವತಂತ್ರವಾಗಿ ಮೋಕ್ಷಪಡೆಯಬಹುದೆಂದು ಪ್ರತಿಪಾದಿಸುತ್ತದೆ. ಇಲ್ಲಿ ಮೋಕ್ಷ ಹೊಂದಲು ಜೈನಧರ್ಮದಂತೆ ಪುರುಷ ಜನ್ಮವನ್ನೇ ಪಡೆಯಬೇಕೆಂಬ ಕಟ್ಟುಪಾಡುಗಳಿಲ್ಲ. ವೇದಗಳ ಕಾಲದಲ್ಲಿದ್ದ ಬ್ರಹ್ಮವಾದಿನಿಯರಂತೆ ಬೌದ್ಧಧರ್ಮದಲ್ಲಿಯೂ ಥೇರಿಗಳು ಇದ್ದರು ಎಂಬುದು ತಿಳಿದುಬರುತ್ತದೆ. ಬೌದ್ಧ ಸಾಹಿತ್ಯದಲ್ಲಿ ಥೇರಿಗಳಿಂದ ರಚಿತವಾದ ಥೇರಿಗಾಥಾಗಳಿಗೆ ಮಹತ್ವದ ಸ್ಥಾನವಿದೆ. ಬಹಳ ಮುಖ್ಯವಾಗಿ ಈ ಮಹತ್ವದ ಸಂಗತಿಗಳನ್ನು ಈ ಗಾಥೆಗಳು ಪ್ರತಿಪಾದಿಸುತ್ತವೆ. ಬೌದ್ಧಧರ್ಮ ವರ್ಣಾಶ್ರಮ ವ್ಯವಸ್ಥೆಯ ವಿರುದ್ಧವೇ ಹೋರಾಡಿದ್ದು. ಆದ್ದರಿಂದಲೇ ಥೇರಿಗಳಲ್ಲಿ ಶೂದ್ರ, ದಲಿತ, ಕ್ಷತ್ರಿಯ, ವೇಶ್ಯಾ ಸ್ತ್ರೀಯರುಗಳೂ ಇರುತ್ತಿದ್ದರು. ಅರಮನೆಯಿಂದ ಬಂದವರಿಗೂ ಅವಕಾಶವಿತ್ತು. ವೇಶ್ಯಾಗೃಹದಿಂದ ಬಂದವರಿಗೂ ಧಾರ್ಮಿಕ ಅವಕಾಶಗಳಿದ್ದವು.

ಕ್ರಿ.ಪೂ. ಸು. ಆರನೇ ಶತಮಾನ ಬೌದ್ಧಧರ್ಮದ ಉನ್ನತ ಕಾಲ. ಅಶೋಕ ಚಕ್ರವರ್ತಿಯ ಮಗಳು ಸಂಘಮಿತ್ರೆ ತಾನು ಭಿಕ್ಷುಕಿಯಾಗಿ ಸಿಂಹಳ ದೇಶಕ್ಕೆ ಹೋಗಿ ಬೌದ್ಧಧರ್ಮವನ್ನು ಪ್ರಸಾರ ಮಾಡಿದ ಇತಿಹಾಸವಿದೆ. ಬುದ್ಧ ವೇಶ್ಯೆ ಆಮ್ರಪಾಲಿಯ ಮನೆಯಲ್ಲಿಯೂ ಆತಿಥ್ಯವನ್ನು ಸ್ವೀಕರಿಸುತ್ತಾನೆ. ಆದ್ದರಿಂದ ಬೌದ್ಧಧರ್ಮದಲ್ಲಿ ವೃತ್ತಿ ಭೇದಗಳಿರಲಿಲ್ಲ. ಜಾತಿಭೇದಗಳಿರಲಿಲ್ಲ. ಆದ್ದರಿಂದ ಬೌದ್ಧಧರ್ಮದ ತತ್ವಗಳು ಸಾಮಾನ್ಯರಿಗಾಗಿ, ಶ್ರೀಸಾಮಾನ್ಯರಿಗಾಗಿಯೇ ರಚಿತವಾದಂತವು. ಬೌದ್ಧಧರ್ಮವೂ ಮಹಿಳೆಯರಿಗೂ ವ್ಯಕ್ತಿತ್ವವಿದೆಯೆಂಬುದನ್ನು ಮಾನ್ಯ ಮಾಡುತ್ತದೆ. ಆದರೆ ಕೆಲವು ವಿಚಾರಗಳಲ್ಲಿ ಮಹಿಳೆಯನ್ನು ಪ್ರತ್ಯೇಕವಾಗಿ ನೋಡಿರುವುದೂ ಇದೆ. ಬುದ್ಧನ ಉಪದೇಶದಲ್ಲಿ 'ಗಂಡನಿಗೆ ನಮ್ರ ಸೇವಕಿಯಾಗು' ಎಂದು ಮಹಿಳೆಯರಿಗೆ ಹೇಳಿದ್ದಿದೆ.

ಬೌದ್ಧಧರ್ಮದ ಮಿತಿಗಳು ಏನೇ ಇರಬಹುದು. ಆದರೆ ಅದು ಉಳಿದ ಎಲ್ಲಾ ಧರ್ಮಗಳಿಗಿಂತ ಮಾನವೀಯವಾದದ್ದು. ಮಹಿಳೆಯರಿಗೆ ಒಂದು ಬಿಡುಗಡೆ ಎಂಬುದನ್ನು ಈ ಧರ್ಮದಲ್ಲಿ ಕಾಣುತ್ತೇವೆ. ಬುದ್ಧನ ಬೋಧನೆಯಲ್ಲಿ ದೇವರಿಲ್ಲ. ಆತ್ಮೋನ್ನತಿ ಎಂದರೆ ಅದೇನು ಅಲೌಕಿಕವಲ್ಲ. ಆತ್ಮವೆನ್ನುವುದೇ ಒಂದು ಭ್ರಾಂತಿ, ಮಾನವನೇ ದೇವರು. ಇಹದ ಬದುಕಿನಲ್ಲಿಯೇ ಶುದ್ಧವಾಗಿ ಬದುಕುವುದನ್ನು ತನ್ನ ಕರ್ಮದ ಮೂಲಕ ನೈಜತೆಗೆ ಬರುವುದನ್ನು ಬುದ್ಧ ಹೇಳಿದ್ದು 'ಅಹಿಂಸೆಯೇ

ಪರಮಧರ್ಮ' ಎಂಬುದು ಆತನ ನಿಲುವು. ಕನಿಷ್ಠವನ್ನು ಶ್ರೇಷ್ಠತೆಗೆ ಒಯ್ಯುವ ಮಾರ್ಗೋಪಾಯಗಳು ಬುದ್ಧನ ತತ್ವಗಳಲ್ಲಿವೆ.[೧]

ಬುದ್ಧನ ಕಾಲದಲ್ಲಿ ದೀಕ್ಷೆಗೆ ಉತ್ತೇಜನ ನೀಡುವುದನ್ನು ಮುಖ್ಯವಾಗಿಸಿ-ಕೊಂಡದ್ದರಿಂದ ಮಹಿಳೆಯರು ಪ್ರಾಪಂಚಿಕ ಚಿಂತನೆಗೆ ಮೂಲಪ್ರಾಯರು, ಮೋಕ್ಷ ಸಾಧನೆಗೆ ಅಡ್ಡಿಯಾಗುವವರು. ಅವರು ಜೊತೆಯಲ್ಲಿದ್ದರೆ ಮಹಾನಿರ್ವಾನ ಅಲಭ್ಯ ಎಂಬ ಅಭಿಪ್ರಾಯ ಬಲಗೊಂಡಿತು. ಇದರಿಂದಾಗಿ ಮಹಿಳೆಯರನ್ನು ತುಚ್ಛವಾಗಿ ನೋಡುವ ಭಾವನೆಗಳು ಬೆಳೆದವು. ಮಹಿಳೆಯರು ಸನ್ಯಾಸವನ್ನು ಸ್ವೀಕರಿಸಿ, ಲೌಕಿಕ ಸಂಪತ್ತನ್ನು ತ್ಯಾಗಮಾಡಿ ಪರಮ ಪದವಿಗಾಗಿ ಜೀವನವನ್ನು ಮುಡುಪಾಗಿಟ್ಟದ್ದು. ಸ್ತ್ರೀ-ಪುರುಷರ ಸ್ವಾಭಾವಿಕ ಬದುಕನ್ನು ಕಟ್ಟಿಹಾಕಿದಂತೆಯೇ ಸರಿ. ಬೌದ್ಧಧರ್ಮದಲ್ಲಿಯೂ ಮಹಿಳೆಯರ ಗುಣದ ಕಡೆಗಿಂತ ದೌರ್ಬಲ್ಯದ ಕಡೆಗೆ ಹೆಚ್ಚು ಒತ್ತು ನೀಡಿದಂತಿದೆ. ಪ್ರಾಮಾಣಿಕವಾದ ಆಧ್ಯಾತ್ಮಿಕ ಪ್ರೇರಣೆ ಇಲ್ಲದೆ ವಿಚಾರದ ನೆಲೆಯಲ್ಲಿ ಆಚಾರಗಳನ್ನು ಹತ್ತಿಕ್ಕಿ ಮುನ್ನಡೆದದ್ದು ಬುದ್ಧನ ತಿಳಿವಳಿಕೆ ಮಹಿಳೆಯರಿಂದ ಧರ್ಮದ ಉದ್ಧಾರ ಸಾಮಾಜಿಕ ಪ್ರಗತಿ. ಎರಡೂ ಸಾಧ್ಯ ಎಂದೂ ಬುದ್ಧ ಎಲ್ಲಿಯೂ ಸ್ಥಾಪಿಸಲಿಲ್ಲ.

### ೨.೪. ಮುಸುಕಿನಲ್ಲಿ ಮಹಿಳೆಯರನ್ನಿಟ್ಟ ಇಸ್ಲಾಂ ಧರ್ಮ

ಇಸ್ಲಾಂ ಧರ್ಮ ಜಗತ್ತಿನ ಎರಡನೇ ಅತಿ ದೊಡ್ಡ ಧರ್ಮ. ಕ್ರಿ.ಶ.೫೭೦-೬೩೨ರ ಸಂದರ್ಭದಲ್ಲಿ ಅರೆಬಿ ಸ್ಥಾನದಲ್ಲಿ ಜನರ ಬದುಕು ಕಷ್ಟಕರವಾಗಿತ್ತು. ಮೂಲಭೂತ ಅವಶ್ಯಕತೆಗಳಿಗಾಗಿ ಜೀವನ ಪರ್ಯಂತ ಹೋರಾಡುತ್ತಿದ್ದರು. ನೂರಾರು ವಿಗ್ರಹಗಳನ್ನು ಪೂಜಿಸುತ್ತಿದ್ದರು. ಸ್ತ್ರೀ-ಪುರುಷರಲ್ಲಿ ಸರಿಸಮಾನತೆ ಇರಲಿಲ್ಲ. ಮಹಿಳೆಯರಿಗೆ, ಪುರುಷರಿಗೆ ಸಮಾನವಾದ ಹಕ್ಕುಗಳಿರಲಿಲ್ಲ. ಮಹಿಳೆಯರು ಭೋಗವಸ್ತುಗಳಾಗಿದ್ದರು. ಮಹಿಳೆಯರನ್ನು ಎರವಲು ನೀಡುವ, ಅತಿಥಿಗಳ ಸತ್ಕಾರಕ್ಕೆ ಬಿಡುವ, ಹುಟ್ಟಿದ ಹೆಣ್ಣುಮಕ್ಕಳು ಬೇಡವೆನಿಸಿದರೆ ವಿಚ್ಛೇದನ ನೀಡುವಂತಹ ಪದ್ಧತಿಗಳು ರೂಢಿಯಲ್ಲಿದ್ದು, ಮಹಿಳೆಯರ ಧಾರ್ಮಿಕ ಸ್ಥಿತಿಗತಿಗಳು ಉತ್ತಮವಾಗಿರಲಿಲ್ಲ. ಇಸ್ಲಾಂ ಧರ್ಮದಲ್ಲಿ ಮುಸ್ಲಿಂ ಮಹಿಳೆಯ ಸ್ಥಾನಮಾನ, ಕಾರ್ಯಕ್ಷೇತ್ರ, ಹಕ್ಕುಗಳು, ಕರ್ತವ್ಯಗಳನ್ನು ಕುರಿತಾದ ಚರ್ಚೆಗೆ ಅವಕಾಶವಿದೆ. ಈ ಧರ್ಮದಲ್ಲಿನ ಮಹಿಳೆಯರ ಸ್ಥಾನಮಾನಗಳನ್ನು ಕುರಿತು ವಿವೇಚಿಸಬಹುದು.

---

೧. ಮಹಿಳಾ ಚಳವಳಿ - ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೩೬-೮೦, ಕರ್ತೃ: ಡಾ. ಹಾಲತಿ ಸೋಮಶೇಖರ್.

ಮಹಿಳೆಯರ ಬಗ್ಗೆ ಅರಬ್ಬರಲ್ಲಿ ಕರುಣೆ ಮತ್ತು ವಾತ್ಸಲ್ಯದ ಭಾವನೆಯೇ ಇರಲಿಲ್ಲ. ಅವರು ಹೆಣ್ಣುಮಕ್ಕಳನ್ನು ಜೀವಂತ ಹೂಳಿಬಿಡುತ್ತಿದ್ದರು. ಇಲ್ಲವೆ ಬಾವಿಗೆ ದೂಡುತ್ತಿದ್ದರು. ಹೆಣ್ಣೆಂಬ ಕಾರಣಕ್ಕೆ ಜೀವಂತ ಉಳಿಸುತ್ತಿರಲಿಲ್ಲ. ಜೀವಂತ ಉಳಿಸಿದರೂ ಜೀವನದ ಯಾವ ಹಕ್ಕುಗಳೂ ಮಹಿಳೆಗೆ ಇರಲಿಲ್ಲ ಎಂಬುದು ತಿಳಿಯುತ್ತದೆ. ಪುರುಷರು ಎಷ್ಟು ಜನ ಹೆಂಗಸರನ್ನಾದರೂ ವಿವಾಹವಾಗಬಹುದಿತ್ತು. ಮುಸ್ಲಿಂ ಮಹಿಳೆಯಾದವಳಿಗೆ ಆಸ್ತಿಯ ಹಕ್ಕಿರಲಿಲ್ಲ. ಇಂಥ ಸಂದರ್ಭದಲ್ಲಿ ಮಹಮದ್ ಪೈಗಂಬರರು ಇಸ್ಲಾಂ ಧರ್ಮದ ಜೀವನ ಸಂದೇಶ ಸಾರಿದರು.

ಇಸ್ಲಾಂ ಧರ್ಮದಲ್ಲಿ ಸ್ತ್ರೀ–ಪುರುಷರಿಬ್ಬರಿಗೂ ತಮ್ಮ ದೃಷ್ಟಿಯನ್ನು ತಗ್ಗಿಸಿಡಲು ಆದೇಶಿಸಲಾಯಿತು. ವ್ಯಭಿಚಾರಿ ಸ್ತ್ರೀ–ಪುರುಷರನ್ನು ಬಹಿಷ್ಕರಿಸುವಂತೆ ಆದೇಶಿಸ-ಲಾಯಿತು. ಅವರ ಜೊತೆ, ಮುಸ್ಲಿಮರು ವೈವಾಹಿಕ ಸಂಬಂಧ ಸ್ಥಾಪಿಸುವುದನ್ನು ನಿಷೇಧಿಸಲಾಯಿತು. ಮಹಿಳೆಯರು ತಮ್ಮ ಮನೆಯೊಳಗೆ ತಲೆ ಮತ್ತು ಎದೆಗಳನ್ನು ಮರೆಸಿಡಬೇಕು ಎಂದು ಆಜ್ಞೆ ಮಾಡಲಾಯಿತು. ತಮ್ಮ ನಿಕಟ ರಕ್ತಸಂಬಂಧಿಗಳು ಮತ್ತು ಮನೆಯ ಖಾಸಗಿ ಸೇವಕರ ವಿನಾ ಇತರರ ಮುಂದೆ ಶೃಂಗರಿಸಿಕೊಂಡು ಬರಬಾರದೆಂದು ಅಪ್ಪಣೆ ಮಾಡಲಾಯಿತು.

ವಿವಾಹವೆಂಬುದು ಬದುಕಿನ ಪ್ರಮುಖ ಘಟ್ಟ. ಆದಿಮಾನವನ ಕಾಲದಲ್ಲಿ ಹೆಣ್ಣುಗಂಡುಗಳ ಜೊತೆಗೂಡುವಿಕೆ ಸ್ವೇಚ್ಛೆಯಾಗಿತ್ತು. ನಾಗರಿಕತೆಗೆ ಮಾನವ ಬಂದಂತೆಲ್ಲಾ ಸ್ವೇಚ್ಛೆಯಾಗಿದ್ದ ಒಂದುಗೂಡುವಿಕೆಯನ್ನು ಶಾಸ್ತ್ರೋಕ್ತ ಕಟ್ಟುಪಾಡುಗಳ ವ್ಯಾಪ್ತಿಗೆ ತಂದ. ಮನುಷ್ಯನೇ ಕಟ್ಟಿಕೊಂಡ ಈ ಏರ್ಪಾಡಿಗೆ ಪುರೋಹಿತ ಧಾರ್ಮಿಕ ವಿವರಣೆ ನೀಡಿ ಮನಸ್ಸುಗಳನ್ನು ಧಾರ್ಮಿಕ ಚೌಕಟ್ಟಿನಲ್ಲಿ ಬಂಧಿಸಿದ. ಈ ಪ್ರಕ್ರಿಯೆಯಲ್ಲಿ ಸ್ತ್ರೀ–ಪುರುಷರಲ್ಲಿ ಭೇದವೆಣಿಸಿದ; ಪುರುಷ ಯಜಮಾನ್ಯವನ್ನು ಸ್ಥಾಪಿಸಿದ. ಹೀಗಾಗಿ ಎಲ್ಲಾ ಧರ್ಮಗಳಲ್ಲಿಯೂ ವಿವಾಹದ ವಿಷಯದಲ್ಲಿ ತಮ್ಮದೇ ಆದ ಶಾಸ್ತ್ರೋಕ್ತ ಶಿಸ್ತನ್ನು ಹೇಳುತ್ತವೆ. ಈ ಹಿನ್ನೆಲೆಯಲ್ಲಿ ಇಸ್ಲಾಂ ಧರ್ಮದಲ್ಲಿನ ದಾಂಪತ್ಯ ಹಕ್ಕುಬಾಧ್ಯತೆಗಳನ್ನು ಇಲ್ಲಿ ಪರಿಶೀಲಿಸಲಾಗಿದೆ.

ಇಸ್ಲಾಂ ಧರ್ಮದಲ್ಲಿಯೂ ಮಹಿಳೆ ಕೊಳ್ಳುವ ಸರಕಾಗಿದ್ದಾಳೆ. ಈ ಸರಕು ಕೊಂಡವನ ಸ್ವತ್ತಿನಂತೆ ಬಳಕೆ ಮಾಡಬೇಕೆಂದು ನಿರ್ದೇಶಿಸುವುದೇ ಸ್ತ್ರೀ–ಪುರುಷ ಸಮಾನತೆಯಲ್ಲ. ಸ್ತ್ರೀ–ಪುರುಷರ ವೈವಾಹಿಕ ಸಂಬಂಧದಲ್ಲಿ ವ್ಯವಸ್ಥಿತಗೊಳಿಸಲು ರಚಿಸಲಾಗಿರುವ ಕಾನೂನಿನ ಚೌಕಟ್ಟಿನಿಂದ ಸ್ತ್ರೀಯಾಗಲಿ ಪುರುಷನಾಗಲಿ ಸಮಾನ

ಸೌಜನ್ಯದ ಹಕ್ಕಿದೆ ಎನ್ನುವ ಇಸ್ಲಾಂ ಧರ್ಮವು ತಲಾಕ್‌ನ ವಿಷಯದಲ್ಲಿ ಪುರುಷನಿಗೆ ವಿಶಿಷ್ಟತೆಯನ್ನು; ಶ್ರೇಷ್ಠತೆಯನ್ನು ಹೇಳಿ, ಹೆಂಡತಿಯಾದವಳಿಗೆ ತಲಾಕ್‌ನ ಹಕ್ಕು ನೀಡಿದರೆ ಪುರುಷನ ಹಕ್ಕು ಚ್ಯುತಿ ಮಾಡುತ್ತಾಳೆ. ಅವಳು ಸ್ವತಂತ್ರಳಾಗುತ್ತಾಳೆ ಎಂದು ವಿವರಿಸುವುದನ್ನು ನೋಡಿದರೆ ಮಹಿಳೆ ಸ್ವತಂತ್ರಳಾಗಬಾರದು, ಮಾತ್ರವಲ್ಲ ಗಂಡನ ಮೇಲೆ ಯಾವುದೇ ಅಧಿಕಾರ ಚಲಾಯಿಸಬಾರದು. ತಲಾಕ್‌ನ ಭಯದಲ್ಲಿ ಬದುಕು ಕಳೆಯುವಂತೆ ಹೇಳಿದಂತಾಗುತ್ತದೆ. ಆದ್ದರಿಂದ ತಲಾಕ್ ನೀಡುವ ಅಧಿಕಾರ ಇಬ್ಬರಿಗೂ ಇರಬೇಕಾದದ್ದು ನ್ಯಾಯಯುತವಾದುದ್ದು.

ವಸ್ತ್ರಧಾರಣೆಯ ವಿಷಯದಲ್ಲಿ ಪುರುಷನಿಗಿಂತ ಮಹಿಳೆಯರ ಹೊಣೆಗಾರಿಕೆ ಅಧಿಕವೆಂದು ಇಸ್ಲಾಂ ಧರ್ಮ ಹೇಳುತ್ತದೆ. ಮಹಿಳೆಯ ದೇಹ ರಚನೆಯಲ್ಲಿರುವ ವಿಶಿಷ್ಟ ಆಕರ್ಷಣೆಯು ಪುರುಷನಿಗಿಂತ ಎಷ್ಟೋ ಪಾಲು ಮಿಗಿಲಾಗಿರುವುದರಿಂದ ಮಹಿಳೆ ಮತ್ತು ಪುರುಷರಿಬ್ಬರನ್ನು ಸೃಷ್ಟಿಸಿರುವ ಅಲ್ಲಾಹನು ಮಹಿಳೆಯಲ್ಲಿ ಪುರುಷನಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಲಜ್ಜೆಯನ್ನು ಮೈಗೂಡಿಸಿರುವನು ಎಂಬ ವಿವರಣೆ ಇದಕ್ಕಿದೆ. ಪುರುಷರಲ್ಲಿ ಚಿತ್ತಚಾಂಚಲ್ಯವನ್ನುಂಟುಮಾಡಬಲ್ಲ ಮಹಿಳೆಯರ ಅಂಗಾಂಗಗಳನ್ನು ಮುಚ್ಚಲೇಬೇಕೆಂದು ಇಸ್ಲಾಂ ಧರ್ಮ ತನ್ನ ಅನುಯಾಯಿಗಳಿಗೆ ಕಡ್ಡಾಯಗೊಳಿಸಿದೆ. ಪುರುಷರು ಮೊಣಕಾಲಿನಿಂದ ಹೊಕ್ಕುಳದವರೆಗಿನ ದೇಹ ಭಾಗವನ್ನು ಸದಾ ಮುಚ್ಚಿರಬೇಕು. ಮಹಿಳೆಯು ಮುಖ ಮತ್ತು ಅಂಗೈಗಳನ್ನು ಹೊರತುಪಡಿಸಿ ತನ್ನ ಸಂಪೂರ್ಣ ದೇಹವನ್ನು ಮುಚ್ಚಿಕೊಳ್ಳಬೇಕು. ಅದನ್ನು ಆಕೆ ತನ್ನ ಗಂಡನ ಹೊರತು ಇತರ ಯಾರಿಗೂ ಕಾಣದಂತೆ ಮುಚ್ಚಿಕೊಂಡಿರಬೇಕು. ಈ ನಿಯಮಗಳು ಸ್ತ್ರೀಯು ಋತುಮತಿಯಾದಂದಿನಿಂದ ಆಕೆ ಲೈಂಗಿಕ ಆಕರ್ಷಣೆ ಕಳೆದುಕೊಳ್ಳುವ ಮುದಿ ಪ್ರಾಯಕ್ಕೆ ತಲುಪುವ ತನಕ ಕಡ್ಡಾಯವಾಗಿದೆ.

ಇಸ್ಲಾಂ ಸಮಾಜವು ಮಹಿಳೆಯರ ವಿಷಯದಲ್ಲಿ ತರತಮವನ್ನೇ ಹೇಳುತ್ತದೆ. ಪುರುಷನಿಗೊಂದು ನೀತಿ, ಮಹಿಳೆಯರಿಗೊಂದು ನೀತಿ ಇಲ್ಲಿದೆ. ಇಸ್ಲಾಂ ಧರ್ಮದಲ್ಲಿಯೂ ಸಹ ಮಹಿಳೆ ಎರಡನೇ ದರ್ಜೆ ಪ್ರಜೆಯಾಗಿಯೇ ಬದುಕುತ್ತಿದ್ದಾಳೆ. ಪುರುಷನಿಗಿರುವ ಧಾರ್ಮಿಕ ಸ್ವಾತಂತ್ರ್ಯವನ್ನು ಮಹಿಳೆ ಅನುಭವಿಸುತ್ತಿಲ್ಲ. ಒಂದು ರೀತಿಯಲ್ಲಿ ಮುಸುಕಿನಲ್ಲಿ ಮುಸ್ಲಿಂ ಮಹಿಳೆ ಕೊಳೆಯುತ್ತಿದ್ದಾಳೆ. ಇತಿಹಾಸದುದ್ದಕ್ಕೂ ಮಹಿಳೆ ಶೋಷಣೆಗೆ ಒಳಗಾಗುತ್ತಾ ಬಂದಿದ್ದಾಳೆ. ಆಕೆಯ ಶೋಷಣೆಯು ಅಂತಿಮ ಹಂತಕ್ಕೆ ತಲುಪಿದಾಗ ಅದರ ಪರಿಣಾಮಗಳು ಅತ್ಯಂತ ಭಯಂಕರ ರೂಪದಲ್ಲಿ ಪ್ರಕಟಗೊಳ್ಳುತ್ತದೆ. ಆಧುನಿಕ ಬದುಕಿನಲ್ಲಿ ಅನೇಕ ಬಗೆಯಲ್ಲಿ ಕ್ರಾಂತಿಗಳಾಗಿರುವಂತೆ

ಮಹಿಳೆಯರ ಸಾಮಾಜಿಕ ಮತ್ತು ಧಾರ್ಮಿಕ ಸ್ಥಾನಮಾನಗಳು ಬದಲಾಗತೊಡಗಿವೆ. ಪುರುಷರಿಗೆ ಮಾತ್ರವೇ ಸೀಮಿತವಾಗಿದ್ದ ಸ್ಥಾನಗಳಲ್ಲಿ ಮಹಿಳೆಯರೂ ಸ್ಪರ್ಧಿಸಿ ಆಕ್ರಮಿಸಿಕೊಳ್ಳುತ್ತಿದ್ದಾರೆ.[೧]

ಜುಮಾ ನಮಾಝ್ ಇಸ್ಲಾಂ ಸಂಘ ಜೀವನದ ಪ್ರತೀಕವಾಗಿದೆ. ಶರೀಅತ್ ಮಹಿಳೆಗೆ ಸಾಮೂಹಿಕ ಆರಾಧನಾ ಕ್ರಮದಿಂದ ವಿನಾಯಿತಿ ನೀಡಿದೆ. ಅಂದರೆ ಮಹಿಳೆ ಮಸೀದಿಗೆ ಹೋಗುವಂತಿಲ್ಲ. ತಾವಿರುವ ಮನೆಯ ಒಳಕೋಣೆಯಲ್ಲಿ ನಮಾಝ್ ಮಾಡುವುದು ಮಸೀದಿಯಲ್ಲಿ ಮಾಡುವ ನಮಾಝ್‌ಗಿಂತ ಉತ್ತಮವಾಗಿದೆ ಎನ್ನುತ್ತದೆ. ಇಸ್ಲಾಮಿನ ಧಾರ್ಮಿಕ ಕಾನೂನು, ಮನೆಯ ಹೊರಗಿನ ಎಲ್ಲಾ ಧಾರ್ಮಿಕ ಕರ್ತವ್ಯಗಳಿಂದಲೂ ಮಹಿಳೆಯರನ್ನು ಮುಕ್ತಗೊಳಿಸಲಾಗಿದೆ. ಶುಕ್ರವಾರ ಕಡ್ಡಾಯ ನಮಾಝ್‌ನಿಂದಲೂ ಆಕೆಗೆ ವಿನಾಯಿತಿ ನೀಡಲಾಗಿದೆ. ಧರ್ಮಯುದ್ಧದಲ್ಲಿಯೂ ಆಕೆಯು ಪಾಲ್ಗೊಳ್ಳಬೇಕಾಗಿಲ್ಲ. ಶವಸಂಸ್ಕಾರದಂಥ ದುಃಖದ ಕಾರ್ಯಗಳಲ್ಲಿಯೂ ಭಾಗವಹಿಸಬೇಕಾಗಿಲ್ಲ. ಧಾರ್ಮಿಕ ಸ್ವಾತಂತ್ರ್ಯಕ್ಕೂ ಮಹಿಳೆಗೆ ಇಸ್ಲಾಂ ಧರ್ಮದಲ್ಲಿ ಹೀಗೆ ಹಲವು ಪ್ರತಿಬಂಧಕಗಳಿರುವುದನ್ನು ಗಮನಿಸಬಹುದು.

ಪುರುಷರ ದೌರ್ಬಲ್ಯಗಳನ್ನು ತಡೆಯಲು ಮಹಿಳೆಯರಿಗೆ ಕಟ್ಟುಪಾಡುಗಳನ್ನು ರೂಪಿಸಿರುವ ಹಿಂದೂಧರ್ಮ ಸೂತ್ರಗಳಂತೆ ಇಸ್ಲಾಂ ಧರ್ಮವು ಕೆಲವು ನಿಷೇಧಗಳನ್ನು ಹೇಳುತ್ತದೆ. ಸ್ತ್ರೀಶಿಕ್ಷಣಕ್ಕೂ ಪುರುಷರ ಶಿಕ್ಷಣದಷ್ಟೇ ಮಹತ್ವವನ್ನು ಈ ಇಸ್ಲಾಂ ಧರ್ಮವು ಸ್ಪಷ್ಟಪಡಿಸುತ್ತದೆ. ಮುಸ್ಲಿಂ ಪುರುಷರು ಧರ್ಮದ ಹೆಸರಿನಲ್ಲಿ ಮಹಿಳೆಯರನ್ನು ಹೇಗೆ ವಂಚಿಸುತ್ತಲೇ ಬಂದಿದ್ದಾರೆ ಎಂಬುದನ್ನು ಈಗಲಾದರೂ ಮುಸ್ಲಿಂ ಮಹಿಳೆಯರು ಮನವರಿಕೆ ಮಾಡಿಕೊಳ್ಳಬೇಕಾಗಿದೆ. ಮಹಿಳೆಯರಿಗೆ ಶಿಕ್ಷಣ ನೀಡದೆ, ಧಾರ್ಮಿಕವಾಗಿಯೂ ಅವರನ್ನು ಅಜ್ಞಾನಿಗಳಾಗಿಸಿ ಅವರನ್ನು ನಾಲ್ಕು ಗೋಡೆಗಳೊಳಗೆ ಬಂಧಿಸಿಟ್ಟು, ಪುರುಷರು ಎಸಗುವ ಎಲ್ಲ ಅಪರಾಧಗಳನ್ನೂ ಮಹಿಳೆಯರ ತಲೆಗೆ ಕಟ್ಟಿ ಅವರಿಗೆ ಶಿಕ್ಷೆ ನೀಡುವ ಈ ಪರಿಪಾಠ ಇಂದು ನಿನ್ನೆಯದಲ್ಲ. ಅನಕ್ಷರಸ್ಥರೂ, ಧಾರ್ಮಿಕವಾಗಿ ತೀರಾ ಅಜ್ಞಾನಿಗಳೂ ಆದ ಮತ್ತು ಬಡತನದ ಬೇಗೆಯಲ್ಲಿ ಬೇಯುತ್ತಿರುವ ಈ ಮುಸ್ಲಿಂ ಮಹಿಳೆಯರನ್ನು ಈ ಧಾರ್ಮಿಕ ಮುಖಂಡರೆಂದು ಕರೆಸಿಕೊಂಡವರು ತಮ್ಮ ತಾಳಕ್ಕೆ ತಕ್ಕಂತೆ ಕುಣಿಸುವಲ್ಲಿ

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೧೦೪-೧೧೦. ಕರ್ತೃ: ಡಾ. ಹಾಲತಿ ಸೋಮಶೇಖರ್.

ಸಫಲರಾಗಿದ್ದಾರೆ. ಆಸ್ತಿಯಲ್ಲಿ ಪಾಲು ನೀಡಬೇಕೆಂಬ ಧಾರ್ಮಿಕ ನಿಯಮವಿದ್ದರೂ ಮಹಿಳೆಯರಿಗೆ ಮದುವೆಯಾದ ಬಳಿಕ ತವರಿನಿಂದ ದೊರೆಯುವುದು ಅಷ್ಟಕಷ್ಟೆ.

ಸ್ತ್ರೀವಾದ, ಸಮಾನತೆ, ಮಹಿಳಾ ಸ್ವಾತಂತ್ರ್ಯ ಮುಂತಾದ ಶಬ್ದಗಳು ಬಡ ಮುಸ್ಲಿಂ ಮಹಿಳೆಯರ ಶಬ್ದಕೋಶದಲ್ಲಿ ಇಲ್ಲದ ಪದಗಳು. ಓರ್ವ ಮಹಿಳೆಯು ಈ ಕುರಿತು ಧ್ವನಿ ಎತ್ತುತ್ತಾಳೆ. ಮಹಿಳೆಯರಲ್ಲಿ ಜಾಗೃತಿ ಮೂಡಿಸಬಹುದು. ಸಂಘಟನೆಯೊಂದು ರೂಪು ತಳೆಯಬಹುದು ಎಂಬ ಸೂಚನೆ ದೊರೆತೊಡನೆ ಈ ಸಮಾಜದ ಪುರುಷರು ಆಕೆಯ ಧ್ವನಿ ಅಡಗಿಸಲು ಬೇಕಾದ ಎಲ್ಲಾ ರೀತಿಯ ಅಪಪ್ರಚಾರಗಳನ್ನು ತಮ್ಮ ಪತ್ರಿಕೆಗಳ ಮೂಲಕ ಕೈಗೊಳ್ಳುತ್ತಾರೆ. "ಆಕೆ ಮುಸ್ಲಿಮಳೇ ಅಲ್ಲ; ಆಕೆ ಮತಾಂತರಗೊಂಡವಳು ಅಥವಾ ನಾಮಧಾರಿ ಮುಸ್ಲಿಂ" ಎಂಬುದು ಇವರ ಪ್ರಚಾರದ ಒಂದು ಮಾದರಿ. ಧರ್ಮಾಂಧತೆ ಅಷ್ಟೇ ಸಾಕು. ಬಳಿಕ ಆಕೆಯಲ್ಲಿ ಈ ಜನರಿಗೆ ವಿಶ್ವಾಸ ಮೂಡದು. ಅಂತಹ ಮಹಿಳೆಯೋರ್ವಳನ್ನು ಮೆಟ್ಟಿ ತುಳಿಯಲು ಇನ್ನೋರ್ವ ಮಹಿಳೆಯನ್ನು ಉಪಯೋಗಿಸುವ ಕುತಂತ್ರವೂ ಇವರಲ್ಲಿದೆ ಅಥವಾ ಮಹಿಳೆಯರ ಶಕ್ತಿ ಮುರಿಯಲು ಮಹಿಳೆಯರನ್ನೇ ಉಪಯೋಗಿಸುವುದು ಇದೆ.

ಭಾರತದಲ್ಲಿ ಮುಸ್ಲಿಂ ಮಹಿಳೆಯರಿಗೆ ಕೆಲವೊಂದು ಹಕ್ಕುಗಳೂ ಇವೆ. ಭಾರತದ ಸಂವಿಧಾನದಲ್ಲಿ ಸರ್ವರಿಗೂ ಸಮಾನತೆಯಿದೆ. ತನಗೆ ಅನ್ಯಾಯವಾದಾಗ ಅದನ್ನು ಪ್ರಶ್ನಿಸಿ ನ್ಯಾಯಾಲಯದ ಕಟ್ಟೆ ಹತ್ತುವ ಅವಕಾಶ ಆಕೆಗೆ ಇತ್ತು. ಆದರೆ ಸಂವಿಧಾನದತ್ತವಾದ ಈ ಅವಕಾಶವು ಧರ್ಮ ಮತ್ತು ರಾಜಕೀಯದ ಬೆರಕೆಯಿಂದಾಗಿ ಮುಸ್ಲಿಂ ಮಹಿಳೆಯರಿಗೆ ದೊರೆಯದಂತಾಗಿದೆ. ಮಹಿಳೆಯರಿಗೆ ಸಂವಿಧಾನದಿಂದ ದೊರೆತ ಈ ಸೌಲಭ್ಯವನ್ನು ಧರ್ಮಕ್ಕನುಸಾರವಾಗಿ ರಚಿಸಲ್ಪಟ್ಟ ವ್ಯಕ್ತಿ ನಿಯಮಕ್ಕನುಗುಣವಾಗಿ ಹತ್ತಿಕ್ಕಲಾಗಿದೆ. ನ್ಯಾಯಾಲಯವೇನೋ ಮಹಿಳೆಯರ ಹಕ್ಕುಗಳನ್ನು ಎತ್ತಿ ಹಿಡಿಯುತ್ತಲೇ ಇದೆ. ಆದರೆ ಧರ್ಮ ಮತ್ತು ವ್ಯಕ್ತಿನಿಯಮದ ರಕ್ಷಣೆಯ ಹೆಸರಿನಲ್ಲಿ ಈ ಹಕ್ಕುಗಳನ್ನು ಹತ್ತಿಕ್ಕುತ್ತಾ ಮುಸ್ಲಿಂ ಮಹಿಳೆಯರನ್ನು ಮೂಲೆಗೊತ್ತರಿಸಲಾಗುತ್ತಿದೆ. ಕಳೆದೆರಡು ದಶಕಗಳಿಂದಲೂ ಮುಸ್ಲಿಂ ಮಹಿಳೆಯರನ್ನು ಮತ್ತಷ್ಟು ಪರ್ದಾದೊಳಗೆ ನೂಕುವ ಪ್ರಯತ್ನವನ್ನು ಕೆಲವು ಧಾರ್ಮಿಕ ಸಂಘಟನೆಗಳು ವ್ಯವಸ್ಥಿತವಾಗಿ ಮಾಡುತ್ತಿವೆ.[೧]

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೧೧೭-೧೧೮. ಕರ್ತೃ: ಡಾ. ಹಾಲತಿ ಸೋಮಶೇಖರ್.

ಒಂದೆಡೆ ಧರ್ಮ ಬೆಳವಣಿಗೆ ಹೊಂದುತ್ತಿದ್ದರೆ, ಇನ್ನೊಂದೆಡೆ ಧರ್ಮದ ತಿರುಳನ್ನು ತಿರುಚಿ ಜನರನ್ನು ಅಂಧಕಾರಕ್ಕೊಯ್ಯುವ ಧರ್ಮಗುರುಗಳೂ ಹುಟ್ಟಿಕೊಳ್ಳ-ತೊಡಗಿದರು. ಇದರ ಫಲವಾಗಿಯೇ, ಮಹಿಳೆಯರಿಗೆ ವಿದ್ಯಾಭ್ಯಾಸ ನೀಡಲೇಬೇಕೆಂದು ಪ್ರವಾದಿಗಳು ಬೋಧಿಸಿದ್ದರೂ ಆ ಬೋಧನೆ ಮೂಲೆಗೆ ತಳ್ಳಲ್ಪಟ್ಟು ಮಹಿಳೆಯರನ್ನು ಮನೆಯ ನಾಲ್ಕು ಗೋಡೆಗಳೊಳಗೆ ಬಂಧಿಸಿಟ್ಟು ಹೆರಿಗೆಯ ಯಂತ್ರವೆಂಬಂತೆ ನಡೆಸಿಕೊಳ್ಳಲಾಯಿತು. ಜಗತ್ತಿನ ಇತರ ಭಾಷೆಗಳಿಂದ ಭಾಷಾಂತರಿಸಲ್ಪಟ್ಟ ಸಾಹಿತ್ಯ ಕೃತಿಗಳು ೧೫ನೇ ಶತಮಾನದ ಹೊತ್ತಿಗೆ ಸಾಗರದ ತಳಸೇರಿದವು. ತಾಯಂದಿರ ಈ ಅನಕ್ಷರತೆ ಹಾಗೂ ಧರ್ಮಗುರುಗಳಲ್ಲಿರುವ ಆಧುನಿಕ ವಿದ್ಯಾಭ್ಯಾಸದ ಕೊರತೆಯೇ ಇಂದು ನಾವು ಕಾಣುತ್ತಿರುವ ಈ ಮತಾಂಧತೆ ಹಾಗೂ ಮೂಢನಂಬಿಕೆಗೆ ಮೂಲ ಕಾರಣ.

ಒಟ್ಟಾರೆ ಇಸ್ಲಾಂಧರ್ಮ ಸ್ತ್ರೀ–ಪುರುಷರಲ್ಲಿ ಸರ್ವಸಮಾನತೆಯನ್ನು ಹೇಳುವುದಿಲ್ಲ. ಪುರುಷನಿಗೆ ಮಹಿಳೆಗಿಂತ ಹೆಚ್ಚಿನ ಆದ್ಯತೆ ಇಸ್ಲಾಮಿ ಸಮಾಜದಲ್ಲಿದೆ. ಮಹಿಳೆಯರನ್ನು ಪತಿಯಂದಿರ ಜೊತೆ ಸೌಜನ್ಯದಿಂದ ವರ್ತಿಸುವಂತೆ, ಅವರ ಮೆಚ್ಚುಗೆ ಗಳಿಸುವಂತೆ, ದಾಂಪತ್ಯ ಸುಖಮಯವಾಗಿರಲು ಪತಿಯರನ್ನು ಅನುಸರಿಸಬೇಕೆಂದು ಒತ್ತಾಯಪೂರ್ವಕವಾಗಿಯೇ ಹೇಳುತ್ತದೆ. ಆದರೆ ಆ ಮೂಲಕ ಮಹಿಳೆಯರ ಆಲೋಚನೆ, ಅಭಿಪ್ರಾಯ, ಆಸೆಆಕಾಂಕ್ಷೆಗಳನ್ನು ತುಂಬಾ ಗೌಣವಾಗಿಸಿದೆ. ಸ್ತ್ರೀಪುರುಷರ ಸಮಿಶ್ರ ಯಾವುದೇ ಕಾರ್ಯಕ್ರಮಕ್ಕಾಗಲಿ, ಶಿಕ್ಷಣಕ್ಕಾಗಲಿ ಅವಕಾಶವಿಲ್ಲ. ಓರ್ವ ಮುಸ್ಲಿಂ ಮಹಿಳೆ ಪರಪುರುಷನ ಜತೆ ಸೈನಿಕ ತರಬೇತಿಯಲ್ಲಾಗಲಿ, ಆಟೋಟಗಳಲ್ಲಾಗಲಿ ಭಾಗವಹಿಸುವಂತಿಲ್ಲ. ಇಂಥ ಪ್ರತಿಬಂಧಕಗಳ ಮೂಲಕ ಅಲ್ಲಾನ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ಮಹಿಳೆಯರ ಸಹಜ ವಿಕಾಸವನ್ನೇ ಹತ್ತಿಕ್ಕಲಾಗಿದೆ. ಅದರಲ್ಲೂ ಒಂದೇ ಹಾದಿಯ ಪಯಣಿಗರಾದ ಸ್ತ್ರೀ–ಪುರುಷರಲ್ಲಿ ಅಸಮಾನತೆಯನ್ನು ಘೋಷಿಸುವುದೆಂದರೆ ಅದು ಜೀವ ವಿರೋಧಿ ನಿಲುವು.

## ೨.೫ ಮಹಿಳೆಯನ್ನು ನೋಯಿಸಿದ ದೇವದಾಸಿ ಸಂಪ್ರದಾಯ

'ದೇವದಾಸಿ' ಪದ್ಧತಿ ಎಂಬುದು ಮಹಿಳೆಯನ್ನು ಧಾರ್ಮಿಕವಾಗಿ ಶೋಷಣೆ ಮಾಡುವ ಒಂದು ಸಂಪ್ರದಾಯ. ಧಾರ್ಮಿಕ ಆವರಣದಲ್ಲಿಯೇ ಮಹಿಳೆಯನ್ನು ಲೈಂಗಿಕ ಕಿರುಕುಳಕ್ಕೆ ಒಡ್ಡುವ ಒಂದು ಕ್ರಿಯೆ. ಮಹಿಳೆಯ ಲೈಂಗಿಕ ಸುಲಿಗೆಗೆ ದೇವರು–ಧರ್ಮಗಳು ಪರಸ್ಪರ ಕೈ ಜೋಡಿಸಿ ನಿಂತಿರುವುದನ್ನು ಇಲ್ಲಿ

ಕಾಣಬಹುದಾಗಿದೆ. ದೇವದಾಸಿಯರೆಂದರೆ ದೇವಸ್ಥಾನಗಳಿಗೆ ತಮ್ಮನ್ನು ಅರ್ಪಿಸಿಕೊಂಡವರು, ದೇವರೊಂದಿಗೆ ಮದುವೆಯಾದವರು. ಆದ್ದರಿಂದ ಅವರಿಗೆ ಮತ್ತೊಂದು ಮದುವೆಯಿಲ್ಲ. ಯಾವ ಗಂಡಸೂ ಅವರನ್ನು ಮದುವೆಯಾಗುವುದಿಲ್ಲ. ಆದರೆ ಲೈಂಗಿಕ ತೃಪ್ತಿಯನ್ನು ಮಾತ್ರ ಅನುಭವಿಸುತ್ತಾನೆ. ದೇವಸ್ಥಾನಗಳಲ್ಲಿ ದೇವರಿಗೆ ಆನಂದ ಉಂಟಾಗುವಂತೆ ನರ್ತನ ಮಾಡುತ್ತಾ, ಹಾಡುತ್ತಾ ಜೀವನ ಸವೆಸುವ ಈ ದೇವತೆಯರನ್ನು ಭೋಗಿಸುವವರು ಮಾತ್ರ ಭೂಲೋಕದ ದೇವತೆಗಳು. ಅವರುಗಳೆಂದರೆ ಪುರೋಹಿತರು, ಅರ್ಚಕರು, ರಾಜರುಗಳು, ಜಮೀನುದಾರರು ಮತ್ತು ಶ್ರೀಮಂತರು. ಧಾರ್ಮಿಕ ಅನುಮತಿಯೊಂದಿಗೆ ದೇವದಾಸಿಯರಾಗಿ 'ಭೂಲೋಕದ ಪುರುಷಶ್ರೇಷ್ಠ'ರನ್ನು ಲೈಂಗಿಕ ತೃಪ್ತಿಪಡಿಸಲು ವೇಶ್ಯೆಯರನ್ನಾಗಿ ಮಾರ್ಪಡಿಸುವ ಒಂದು ಕೆಟ್ಟ ಸಂಪ್ರದಾಯ ಈ ದೇವದಾಸಿ ಪದ್ಧತಿ.

ದೇವರಿಗೆ ಅರ್ಪಿಸುತ್ತಿದ್ದ ದೇವದಾಸಿಯರನ್ನು ಬಸವಿಯರು, ಜೋಗತಿಯರು ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಹೀಗೆ ಅರ್ಪಿತರಾಗುವವರೆಂದರೆ ಅಳೇಕ್ಯಾತರು, ಹೊಲೆಯರು, ಮಾದಿಗರು, ದೊಂಬರು, ವಡ್ಡರು, ಬೇಡರು, ಕುರುಬರು ಮತ್ತು ಗೊಲ್ಲರ ಜಾತಿಯವರಾಗಿದ್ದರು. ಇತ್ತೀಚೆಗೆ ಪರಿಶಿಷ್ಟ ಜಾತಿಯವರು ಮಾತ್ರ ದೇವರಿಗೆ ತಮ್ಮ ಹೆಣ್ಣುಮಕ್ಕಳನ್ನು ಅರ್ಪಿಸುವ ಆಚರಣೆಯನ್ನು ಇಟ್ಟುಕೊಂಡಿದ್ದಾರೆ.

ದೇವತೆಗೆ ಹುಡುಗಿಯರನ್ನು ಅರ್ಪಿಸುವಾಗ ಹುಡುಗಿಯರನ್ನು ಆರಿಸುವುದಕ್ಕೆ ಕೆಲವು ನಿಯಮಗಳನ್ನು ಮಾಡಲಾಗಿದೆ. ಅವುಗಳೆಂದರೆ ಹುಡುಗಿ ಋತುಮತಿ–ಯಾಗಿರಬಾರದು. ಯಾವ ರೋಗವಿಲ್ಲದೆ ಆರೋಗ್ಯಕರವಾದ ಶರೀರವನ್ನು ಹೊಂದಿರಬೇಕು. ಲಕ್ಷಣವಾಗಿದ್ದು ರೂಪವತಿಯಾಗಿರಬೇಕು. ಒಂದು ವೇಳೆ ಕುಟುಂಬದ ಸಂಪ್ರದಾಯವನ್ನು ಮುಂದುವರೆಸುವ ಇಚ್ಛೆಯಿಂದ ದೇವದಾಸಿಯ ಮಗಳೊಬ್ಬಳನ್ನು ಸಂಪ್ರದಾಯಕ್ಕೆ ಅರ್ಪಿಸುವುದಾದರೆ ಅವಳು ಹಿರಿಯ ಮಗಳಾಗಿರಬೇಕು. ಬಹುದೊಡ್ಡ ಸಮಾರಂಭದಂತೆ ಮುಕ್ತವಾಗಿ ನಡೆಯುತ್ತಿದ್ದ 'ದೇವರಿಗೆ ಬಿಡುವ' ಸಮಾರಂಭ ಕಾನೂನಿನ ತೊಡಕಿನಿಂದಾಗಿ ದೇವಾಲಯಗಳ ಪುರೋಹಿತರು ಗುಟ್ಟಾಗಿ ಆಚರಿಸಲಾರಂಭಿಸಿದ್ದಾರೆ.

ದೇವತೆಗೆ ಅರ್ಪಿಸಿಕೊಂಡ ಹುಡುಗಿಯು ಋತುಮತಿಯಾದ ಮೇಲೆ ಕನ್ಯತ್ವ ಒಡೆಯುವ ಸಮಾರಂಭ ಮಾಡಲಾಗುತ್ತದೆ. ಹಿಂದೆ ಈ ಕನ್ಯತ್ವ ಒಡೆಯುವ ಹಕ್ಕು ದೇವಾಲಯದ ಪೂಜಾರಿಗೆ ಇತ್ತು. ಈಗ ಸ್ಥಳೀಯ ಮೇಲುಜಾತಿ ಶ್ರೀಮಂತ

ಭೂಒಡೆಯರಿಂದ ಅಥವಾ ವ್ಯಾಪಾರಿಗಳಿಂದ ಕನ್ಯತ್ವ ಒಡೆಸುವುದನ್ನು ಹುಡುಗಿಯ ತಾಯಿ-ತಂದೆಯರಿಗೆ ಹಣಕೊಟ್ಟು ಸಂಬಂಧ ಬೆಳೆಸಿರುತ್ತಾನೆ. ಹಣ, ಒಡವೆ, ಹೊಸಬಟ್ಟೆಗಳು ಹುಡುಗಿಯ ಸಂಬಂಧಿಕರಿಗೆ ಸೇರುತ್ತವೆ. ಹುಡುಗಿಯೊಂದಿಗೆ ಇಷ್ಟವಿರುವವನು ಜೊತೆಗೆ ಆಕೆಯನ್ನು ಕಾಪಾಡುವ ಸಾಮರ್ಥ್ಯವುಳ್ಳವನನ್ನು ಕನ್ಯತ್ವ ಒಡೆಯಲು ಆರಿಸಲಾಗುತ್ತದೆ. ಎಷ್ಟೋ ವೇಳೆ ತನ್ನ ಕನ್ಯತ್ವ ಒಡೆದ ವ್ಯಕ್ತಿಗೆ ಜೀವನವಿಡೀ ನಿಷ್ಠೆಯಿಂದಿರುವುದೂ ಇದೆ. ಆದರೆ ಬಹಳಷ್ಟು ಜನ ಕನ್ಯತ್ವ ಒಡೆದ ನಂತರ ಸೂಳೆಯರಾಗುತ್ತಾರೆ. ಅಂಥ ಸೂಳೆಯರಿಗೆ ಯಾವುದೇ ಪುರುಷನ ಮೇಲೆ ಯಾವ ಹಕ್ಕೂ ಇರುವುದಿಲ್ಲ. ಆಸ್ತಿಯ ಹಕ್ಕೂ ಇರುವುದಿಲ್ಲ. ಈ ಸಂಬಂಧದಲ್ಲಿ ಹುಟ್ಟಿದ ಮಕ್ಕಳಿಗೂ ಯಾವ ರೀತಿಯ ಹಕ್ಕೂ ಇರುವುದಿಲ್ಲ.[೧]

ದೇವದಾಸಿ ಪದ್ಧತಿ ಒಂದು ಸಾಮಾಜಿಕ ದೌಷ್ಟ್ಯ. ಇದೊಂದು ಅನಿಷ್ಟ ಪದ್ಧತಿ. ಬಹುಮಟ್ಟಿಗೆ ಕೆಳಜಾತಿಯ ಜನ ಇಂಥ ಪಾಪಕಾರ್ಯಕ್ಕೆ ಬಲಿಯಾಗಿದ್ದಾರೆ. ಮೈ ಮಾರಿಕೊಂಡು ಬದುಕು ನೂಕುವಂತೆ ಪ್ರೇರಪಿಸುವ ಧಾರ್ಮಿಕ ಒತ್ತಡದಿಂದಾಗಿ ಅನಕ್ಷರಸ್ಥ ಜನ ಸಮುದಾಯ ಅತ್ಯಂತ ಸುಲಭವಾಗಿ ಶೋಷಣೆಗೆ ಬಲಿಯಾಗುತ್ತಿದೆ. ಇಂಥ ಕಾರ್ಯಕ್ಕೆ ತಮ್ಮನ್ನು ತಾವು ಸ್ವಇಚ್ಛೆಯಿಂದಲೇ ಸಮರ್ಪಿಸಿಕೊಳ್ಳುವಂತೆ ಪ್ರಲೋಭನೆಗಳನ್ನು ನೀಡುವುದರ ಜತೆಗೆ ಧಾರ್ಮಿಕ ಬೆದರಿಕೆಯೂ ದೇವದಾಸಿಯರನ್ನಾಗಿ ಮಾಡುತ್ತಿದೆ. ಈ ರೀತಿಯ ಜೀವನ ವಿಧಾನವನ್ನು ಒಪ್ಪಿ ನಡೆಯಲು ಅವರ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಿಸರಗಳ ಪ್ರಭಾವಗಳು ಬಹುವಾಗಿ ಕಾರಣವಾಗಿವೆ.

ದೇವತೆಗಳಿಗೆ ಹೆಣ್ಣುಮಕ್ಕಳನ್ನು ಅರ್ಪಿಸುವ ಸಂಪ್ರದಾಯ ಅನೂಚಾನವಾಗಿ ನಡೆಯುತ್ತಿರುವುದಕ್ಕೆ ಧಾರ್ಮಿಕ ನಂಬಿಕೆ ಮತ್ತು ವೇಶ್ಯಾ ವೃತ್ತಿಗೆಳೆಯುವ ವ್ಯಾಪಾರಿ ಮನೋಧರ್ಮಗಳೆರಡೂ ಕೈಜೋಡಿಸುತ್ತಿವೆ. ಭೂಮಿಯ ಫಲವತ್ತತೆಯಿಂದ ಧಾನ್ಯಗಳನ್ನು ಹೆಚ್ಚಾಗಿ ಬೆಳೆಯುವಂತೆ ಮಾನವ ಸಂಖ್ಯೆಯ ಹೆಚ್ಚಳಕ್ಕಾಗಿ, ಫಲೋತ್ಪತ್ತಿಯ ಅವಧಿಯಲ್ಲಿ ಧಾರ್ಮಿಕ ಆಚರಣೆಯ ಮೂಲಕ ಮಾನವ ಸಂಖ್ಯೆಯನ್ನು ಹೆಚ್ಚಳ ಮಾಡಿಕೊಳ್ಳುವ ಉದ್ದೇಶಕ್ಕಾಗಿ ಈ ಆಚರಣೆ ಬಂದಿದೆ. ದೇವತೆಯರಿಗೆ ಹೆಣ್ಣನ್ನು ಸಮರ್ಪಿಸಿದ್ದೇ ಆದರೆ ಅಭ್ಯುದಯವಾಗುತ್ತದೆ, ವಂಶ ಬೆಳೆಯುತ್ತದೆ ಎಂಬ ಧಾರ್ಮಿಕ ನಂಬಿಕೆ ಕಾರಣವಾಗಿರಬಹುದು.

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೧೬೩-೧೯೯.
ಕರ್ತೃ: ಡಾ. ಹಾಲತಿ ಸೋಮಶೇಖರ್.

ಕರ್ನಾಟಕದಲ್ಲಿ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಗತಿಗಳಲ್ಲಿ ಹನ್ನೆರಡನೆಯ ಶತಮಾನ ಅತ್ಯಂತ ಮಹತ್ವಪೂರ್ಣವಾದುದ್ದು, ಜಾತಿಭೇದ, ಲಿಂಗಭೇದ, ಅಸ್ಪೃಶ್ಯತೆ, ಧಾರ್ಮಿಕ ಶೋಷಣೆ, ದೇವದಾಸಿ ಪದ್ಧತಿ, ಸೂಳೆಗಾರಿಕೆ, ಮೂಢನಂಬಿಕೆಗಳ ವಿರುದ್ಧ ಧಾರ್ಮಿಕ, ಸಾಮಾಜಿಕ ಕ್ರಾಂತಿಯ ಕಿಡಿ ಹೊತ್ತಿಸಿದ ಕಾಲ ವಚನಯುಗ. ಜೈನಧರ್ಮದ ಪ್ರಭಾವ ಅಧಿಕವಾಗಿದ್ದು 'ಸ್ತ್ರೀಯರು ನರಕದ ದಾರಿಗೊಯ್ಯುವ ದೀಪದ ಕಂಬಗಳಂತಿದ್ದಾರೆ' ಎಂದು ನಂಬಿದ್ದ ದಿನಗಳಲ್ಲಿ ಪುರುಷರು ತಮ್ಮ ದೌರ್ಬಲ್ಯಕ್ಕೆ ಸ್ತ್ರೀಯರನ್ನೇಕೆ ನಿಂದಿಸಬೇಕು ಎಂದು ವಿಮರ್ಶೆ ಮಾಡಿದ ಕಾಲ ಅದು.

ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಧಾರ್ಮಿಕ ಸಂಸ್ಕಾರಕ್ಕೆ ಅವಕಾಶ ನೀಡಿ ಅನುಭವ ಮಂಟಪದಲ್ಲಿ ಶೂದ್ರರು, ಅಂತ್ಯಜರು ಮತ್ತು ಮಹಿಳೆಯರು ಪಾಲ್ಗೊಂಡು ಹೊಸದಾದ ಧರ್ಮವನ್ನು ಕಂಡುಕೊಂಡ ಕಾಲಘಟ್ಟ ಅದು. ಪುರೋಹಿತಶಾಹಿಗಳ ದಬ್ಬಾಳಿಕೆಗೆ ಹಲವು ಕಾಯಕ ಜೀವಿಗಳು ತಮ್ಮ ಕೀಳರಿಮೆಯನ್ನು ತೊಡೆದು ಹಾಕಿ ವಚನಗಳನ್ನು ರಚಿಸಿದ್ದು, ಶಿವಶರಣರ ಜೊತೆ ಚರ್ಚೆಯಲ್ಲಿ ಪಾಲ್ಗೊಂಡಿದ್ದು ಬಸವಣ್ಣನಾದಿಯಾಗಿ ಎಲ್ಲಾ ವಚನಕಾರರು ಸಮಾಜದ ಎಲ್ಲಾ ವರ್ಗದವರನ್ನೂ ತಮ್ಮ ಸಾಮಾಜಿಕ ಆಂದೋಲನಕ್ಕೆ ಬರಮಾಡಿಕೊಂಡಿದ್ದು ಮಹತ್ವದ ಸಾಧನೆ. ಅನ್ನ, ಅರಿವೆ, ಆಶ್ರಯಗಳಿಲ್ಲದ ಜನರನ್ನು ದೇವರು ಧರ್ಮದ ಹೆಸರಿನಲ್ಲಿ ದೇವದಾಸಿಯರನ್ನಾಗಿ ಮಾಡಿ ವೇಶ್ಯೆಯರನ್ನಾಗಿಸಿ ಕಾಮಾಂಧರಾದ ಪುರುಷರು ನಿರಂತರ ಅತ್ಯಾಚಾರಕ್ಕೆ ವ್ಯವಸ್ಥಿತ ಸಂಚು ಮಾಡಿಕೊಂಡು ಶೋಷಣೆ ಮಾಡಿದ್ದು ಅತ್ಯಂತ ಅಮಾನವೀಯ-ವಾದದ್ದು.

ದೇವದಾಸಿಯರಿಗೆ ನರ್ತನ ಅಭ್ಯಾಸ ಮಾಡಿಸುವ ನಟುವರ ಜನಾಂಗದಲ್ಲಿ ಹುಟ್ಟಿದ ಅಲ್ಲಮಪ್ರಭು ತನ್ನ ಜ್ಞಾನ, ತಿಳಿವಳಿಕೆ, ಅರಿವು, ಆಚಾರ, ಸಾಧನೆಗಳ ಮೂಲಕ ಜಂಗಮನಾಗಿ ಅನುಭವ ಮಂಟಪದ ಅಧ್ಯಕ್ಷನಾಗಿ ಸರ್ವಾದರಣೀಯನಾಗಿದ್ದಾನೆ. ಅಕ್ಕಮಹಾದೇವಿಯಂಥ ದಿಟ್ಟ ಮಹಿಳೆ ಪುರುಷ ಪ್ರಲೋಭನೆಯನ್ನು ಧಿಕ್ಕರಿಸಿ ತನ್ನ ಇಷ್ಟದೈವವನ್ನು ಪೂಜಿಸಿದವಳು. ಸ್ತ್ರೀ-ಪುರುಷರಿಬ್ಬರೂ ಸಿದ್ಧಿಯ ದಾರಿಯಲ್ಲಿ ಸಮಾನರು ಯಾರಿಗೆ ಯಾರು ವಿಘ್ನರಲ್ಲ, ಹೆಣ್ಣು ಗಂಡೆಂಬ ಶಾರೀರಕ ಭೇದವೇ ವಿನಾ ಆತ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ ಎಂಬ ತತ್ವವನ್ನು ಒಪ್ಪಿ ನಡೆದವರು ವಚನಕಾರರು.

ಹೀಗೆ ದೇವದಾಸಿಯಂಥ ಅನಿಷ್ಟ ಪದ್ಧತಿ ವಿರುದ್ಧ ಹನ್ನೆರಡನೆ ಶತಮಾನದಲ್ಲಿ ಹೋರಾಡಿರುವುದನ್ನು ಹೊರತುಪಡಿಸಿದರೆ ಸ್ವಾತಂತ್ರೋತ್ತರ ಸಂದರ್ಭದಲ್ಲಿಯೂ ಇದನ್ನು ಸಂಪೂರ್ಣ ತೊಡೆದುಹಾಕುವ ಗಟ್ಟಿಯಾದ ಪ್ರಯತ್ನ ನಡೆದಿಲ್ಲವೆಂದೇ ಹೇಳಬೇಕು. ಧಾರ್ಮಿಕ ನಂಬಿಕೆಯೇ ಪ್ರಧಾನವಾಗಿದ್ದು ಆಳದಲ್ಲಿ ಲೈಂಗಿಕ ಶೋಷಣೆ ನಡೆಯುತ್ತಿರುವುದನ್ನು ಕರ್ನಾಟಕ ಸರ್ಕಾರ ಅತ್ಯಂತ ಗಂಭೀರವಾಗಿ ಪರಿಗಣಿಸಿ ದೇವದಾಸಿ ನಿರ್ಮೂಲನೆಯ ಕಾನೂನನ್ನು ೧೯೮೪ರಲ್ಲಿ ಮಾಡಿತು. ನಾಗರಿಕ ಸಮಾಜ ನಾಚಿಕೆ ಪಡುವ ರೀತಿಯಲ್ಲಿ ದೇವದಾಸಿ ಮತ್ತು ಬೆತ್ತಲೆ ಸೇವೆ ಸಂಪ್ರದಾಯಗಳು ನಮ್ಮಲ್ಲಿ ಉಳಿದುಕೊಂಡು ಬರುತ್ತಿವೆ. ತಾನು ಹುಟ್ಟಿದ ಜಾತಿಯ ಅಥವಾ ಧರ್ಮದ ಅಜ್ಞಾನದ ಮೂಢನಂಬಿಕೆಯ ಕಾರಣದಿಂದಾಗಿ ಸಹಸ್ರಾರು ಮಹಿಳೆಯರು ಸಲ್ಲದ ಜೀವನಕ್ಕೆ ತಮಗೆ ತಿಳಿವಳಿಕೆ ಬರುವ ಮುನ್ನವೇ ತಮ್ಮನ್ನು ಸಮರ್ಪಿಸಿಕೊಳ್ಳುತ್ತಿರುವುದು ನಾಚಿಕೆಗೇಡಿನ ವಿಷಯ.[೧]

ದೇವದಾಸಿ ಮತ್ತು ಬೆತ್ತಲೆ ಸೇವೆ ಸಂಪ್ರದಾಯಗಳು ಅತ್ಯಂತ ಅಮಾನವೀಯವಾದ ಆಚರಣೆಗಳೆಂಬುದನ್ನು ಮನಗಂಡು ಈ ಹಿಂದೆಯೇ ಇದನ್ನು ತಡೆಗಟ್ಟುವ ಅನೇಕ ಪ್ರಯತ್ನಗಳು ನಡೆದಿವೆ. ದೇವದಾಸಿ ಪದ್ಧತಿ ಆಚರಿಸುವವರನ್ನು ಕಾನೂನಿನ ಮೂಲಕ ಶಿಕ್ಷಿಸುವ ಮತ್ತು ದೇವದಾಸಿಯರಿಗೆ ಪುನರ್ವಸತಿ ಕಲ್ಪಿಸಿಕೊಟ್ಟು ಬದುಕನ್ನು ಹಸನುಗೊಳಿಸುವ ಕೆಲಸ ನಡೆಯುತ್ತಿದೆ. ದೇವಾಲಯದಲ್ಲಿ ಅರ್ಪಿಸಿದ ಎಲ್ಲಾ ಹೆಣ್ಣುಮಕ್ಕಳು ದೇವದಾಸಿಯರಾಗಿ, ವೇಶ್ಯೆಯರಾಗಿ ಮಾರ್ಪಡುವುದಿಲ್ಲ.

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೧೩೯-೧೩೫.
ಕರ್ತೃ: ಡಾ. ಹಾಲತಿ ಸೋಮಶೇಖರ್.

## ಅಧ್ಯಾಯ – ೩

# ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮಹಿಳಾ ಚಳವಳಿ

ಸಾಂಸ್ಕೃತಿಕ ಸ್ತ್ರೀವಾದವನ್ನು ಸಾರ್ವತ್ರೀಕರಿಸುವುದು ಸಾಧ್ಯವಾಗದ ಮಾತು. ಅಲ್ಲದೇ ಸ್ತ್ರೀತ್ವದ ವಿಜೃಂಭಣೆಯ ತಳಹದಿಯ ಮೇಲೆ ಸ್ತ್ರೀವಾದಿಗಳು ರೂಪಿಸಿರುವ ಈ ಸಿದ್ಧಾಂತವು ಪಶ್ಚಿಮ ದೇಶಗಳ ಬಿಳಿಯ ಸ್ತ್ರೀವಾದಿಗಳಿಂದ ರಚಿತವಾಗಿರುವಂಥದ್ದು. ಆದ್ದರಿಂದ ವೈವಿಧ್ಯಮಯ ಸಂಸ್ಕೃತಿಯುಳ್ಳ ಜಗತ್ತಿನ ನೂರಾರು ದೇಶಗಳಲ್ಲಿ ಸಾರ್ವತ್ರಿಕವಾಗಿ ಅನ್ವಯಿಸಲು ಸಾಧ್ಯವಿಲ್ಲ. ಶೋಷಿತ ದೇಶಗಳಲ್ಲಿ ಹುಟ್ಟುವ ಸ್ತ್ರೀವಾದಿ ಪರಿಕಲ್ಪನೆಗಳೇ ಬೇರೆ ಬಗೆಯಾಗಿವೆ. ಸ್ತ್ರೀವಾದಿ ಬರಹಗಾರರಲ್ಲಿ ಚೆರ್ರಿ ಮೊರಾಗ ಹೀಗೆ ಹೇಳುತ್ತಾರೆ. "ಲೈಂಗಿಕವಾದ ಬಗ್ಗೆ ಹೇಳ ಹೊರಟರೆ ಜಗತ್ತು ತುಂಬಾ ಸಂಕೀರ್ಣವಾಗತೊಡಗುತ್ತದೆ. ಅಧಿಕಾರ ಎನ್ನುವುದು ಸುಲಭವಾದ ಚಿಕ್ಕ ಚಿಕ್ಕ ಶ್ರೇಣಿಕೃತ ಘಟಕಗಳಲ್ಲಿ ಹಂಚಿಕೊಂಡಿರುವುದಿಲ್ಲ. ಬದಲಾಗಿ ಅದರಲ್ಲಿ ಅನೇಕ ಆರಂಭ ಬಿಂದುಗಳು ಸಾಲುಗಟ್ಟಿ ಹೊರಟಿರುತ್ತವೆ. ಈ ಘಟಕಗಳನ್ನು ತಲುಪುವುದು ಸುಲಭವಲ್ಲ. ಆದ್ದರಿಂದ ಶತ್ರುವನ್ನು ಹೆಸರಿಸುವುದೂ ಸುಲಭವಲ್ಲ. ಅದನ್ನು ಬೆಳಕಿಗೆ ತರುವುದು ಕಷ್ಟ. ಕೆಲವು ಪುರುಷರು ತಾವು ಪ್ರೀತಿಸುವ; ತಮ್ಮನ್ನು ಪ್ರೀತಿಸುವ ಸ್ತ್ರೀಯರನ್ನೇ ಶೋಷಿಸುತ್ತಿರುತ್ತಾರೆ" ಎನ್ನುತ್ತಾಳೆ.



ಲಿಂಗಭೇದ ನೀತಿಯಿಂದ ಏರ್ಪಟ್ಟಿರುವ ಸ್ತ್ರೀ ಪುರುಷರ ನಡುವಿನ ಅಸಮಾನತೆ ಮನುಷ್ಯ–ಮನುಷ್ಯರ ಸಹಜವಾದ ಸುಮಧುರ ಸಂಬಂಧಗಳನ್ನೆ ಹಾಳುಮಾಡಿವೆ. ಸಾಂಸ್ಕೃತಿಕ ನೆಲೆಯಲ್ಲಿನ ಇಂಥ ಅಸಮಾನತೆಯನ್ನು ಹೋಗಲಾಡಿಸುವುದು ಇಂದಿನ ಅಗತ್ಯವಾಗಿದೆ. ಅದೇ ಹೊತ್ತಿನಲ್ಲಿ ಸ್ತ್ರೀ–ಪುರುಷರಲ್ಲಿ ಸ್ತ್ರೀಸಮಾನತೆಯ ಚಿಂತನೆ ಮತ್ತು ಸ್ತ್ರೀ ಶಕ್ತಿಯ ಅರಿವನ್ನುಂಟು ಮಾಡುವ ಕಾರ್ಯವೂ ಆಗಬೇಕಿದೆ. ಮಾನವ ಹಕ್ಕುಗಳ ಹೋರಾಟದ ಹಿನ್ನೆಲೆಯಲ್ಲಿ ಮಹಿಳೆಯರನ್ನು, ಮನುಷ್ಯ ಇತಿಹಾಸ ಕಂಡಿರುವ ಬಗೆಯನ್ನು ಮತ್ತು ನಮ್ಮ ಸಾಂಸ್ಕೃತಿಕ ಸ್ತರದಲ್ಲಿ ಮಹಿಳೆಯರಿಗಾಗಿರುವ ಅನ್ಯಾಯವನ್ನು ಸಮಕಾಲೀನ ಆಲೋಚನೆಯೊಂದಿಗೆ ಚರ್ಚಿಸುವುದು ಇಂದಿನ ಅಗತ್ಯವಾಗಿದೆ.[೧]

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೩-೪,
ಕರ್ತೃ: ಡಾ. ಹಾಲತಿ ಸೋಮಶೇಖರ್.

## ೩.೧. ಸ್ತ್ರೀನಿಷ್ಠ ಸಾಂಸ್ಕೃತಿಕ ಚಿಂತನೆಯಾಗಿ ಮಹಿಳಾ ಚಳವಳಿ

ಫ್ರೆಂಚ್ ತತ್ವಜ್ಞಾನಿ ಮತ್ತು ಕ್ರಾಂತಿಕಾರಿ ಬರಹಗಾರ ಕೊಂಡರ್‌ಸೆಟ್‌ನು "The admission of women to full citizenship" ಎಂಬ ಪ್ರಬಂಧವನ್ನು ಪ್ರಕಟಿಸಿದನು. ಅದರಲ್ಲಿ ಪೂರ್ಣ ಪೌರತ್ವಕ್ಕಾಗಿ ಸ್ತ್ರೀಯರ ಪ್ರವೇಶಿಕೆಯನ್ನು ಪರಿಣಾಮಕಾರಿಯಾಗಿ ಪ್ರತಿಪಾದಿಸುತ್ತಾನೆ. ಈ ಪ್ರಬಂಧ ಸ್ತ್ರೀಯರ ಜಾಗೃತಿಗೆ ಕಾರಣವಾಗುತ್ತದೆ. ಮಹಿಳಾ ಚಳವಳಿಯ ಉಗಮಕ್ಕೆ ಇದು ನಾಂದಿ ಹಾಡುತ್ತದೆ. ಸ್ತ್ರೀ ಜಾಗೃತಿ ಕುರಿತಂತೆ ಬಂದ ಮೊದಲ ಬರಹ ಅದಾಗಿದ್ದು ಮಹಿಳೆಯರಲ್ಲಿ ಹೊಸ ಅರಿವನ್ನು ಮೂಡಿಸಲು ಸಹಕಾರಿಯಾಯಿತು.

"ತನ್ನದೇ ಆದ ಸ್ವಾತಂತ್ರ್ಯ ಕೊಡಿ" ಎಂಬ ಕೃತಿಯನ್ನು ೧೯೨೯ರಲ್ಲಿ ಪ್ರಕಟಿಸಿದ ವರ್ಜೀನಿಯಾ ವುಲ್ಫ್ "ಒಬ್ಬಳು ಮಹಿಳೆ ಉತ್ತಮ ಸಾಹಿತ್ಯವನ್ನು ರಚಿಸಬೇಕಾದರೆ ಅವಳಿಗೆ ತನ್ನದೇ ಆದ ಕೊಠಡಿ ಅಥವಾ ಸ್ವತಂತ್ರ ಸ್ಥಳ ಮತ್ತು ಸ್ವಂತ ಆದಾಯಗಳಿರಬೇಕು" ಎಂದು ವಾದಿಸುತ್ತಾಳೆ. ಈ ಮಾತು ಕೇವಲ ಭೌತಿಕ ಸೌಲಭ್ಯಗಳಾಗಿ ಮಾತ್ರವಲ್ಲ ಇದು ಮಹಿಳೆಯರನ್ನು ಆವರಿಸಿರುವ ಕಬಂಧ ಬಾಹುಗಳ ಬಿಡುಗಡೆಯ ಪ್ರತೀಕವಾಗಿ ಕಾಣಿಸಿದ್ದಾಳೆ. ವುಲ್ಫ್‌ಳ ಈ ರೂಪಕ ರಚನೆ ಆಧುನಿಕ ಸ್ತ್ರೀವಾದದ ಪ್ರೇರಕ ಶಕ್ತಿಯಾಗಿದೆ. ಆಕೆಯ 'Women and writing'ನಲ್ಲಿ ಬರಹಗಾರರು ಎದುರಿಸುವ ಮಾನಸಿಕ, ಬೌದ್ಧಿಕ ಅಡ್ಡಿ ಆತಂಕಗಳು ಚರ್ಚೆಯಾಗಿವೆ.

"ಸ್ತ್ರೀ ವಿಮೋಚನೆ ಜಗತ್ತಿನಾದ್ಯಂತ ಶ್ರಮ ಶಕ್ತಿಯನ್ನು ಅವಲಂಬಿಸಿದೆ. ಉತ್ಪಾದನಾ ಪ್ರಕ್ರಿಯೆಯಲ್ಲಿ ಒಂದು ಮಹತ್ತರ ಕ್ರಾಂತಿಯಾದಾಗ ಮಾತ್ರ ಅವಳ ಸ್ಥಿತಿಗತಿ ಬದಲಾಗಲು ಸಾಧ್ಯ. ಉತ್ಪಾದನಾ ಸಾಧನಗಳ ಖಾಸಗಿ ಒಡೆತನ ತೊಲಗಿ, ಅವುಗಳ ಸಾಮಾಜೀಕರಣ ಪೂರ್ಣಗೊಂಡಾಗ ಮಹಿಳಾ ವಿಮೋಚನೆಯ ಕನಸು ನನಸಾಗಬಲ್ಲದು. ನನ್ನ ಈ ನಿಲುವಿನಿಂದಾಗಿಯೇ ನಾನು ಕೇವಲ ಸ್ತ್ರೀವಾದಿ ನೆಲೆಯಿಂದ ತಪ್ಪಿಸಿಕೊಂಡೆ" ಎನ್ನುತ್ತಾಳೆ. ಆಧುನಿಕ ಮಹಿಳೆಯರು ತೀವ್ರವಾದ ಆಂತರಿಕ ಪರಕೀಯತೆಯನ್ನು ಅನುಭವಿಸುತ್ತಿರುವುದು ಪತ್ನಿಯರು, ತಾಯಂದಿರು ಸಾಂಸ್ಕೃತಿಕವಾದ ಸಿದ್ಧಪಾತ್ರಗಳನ್ನು ತಿರಸ್ಕರಿಸುವುದಾದಲ್ಲಿ ಮಾತ್ರ ಮನೆಯ ಹೊರಗೆ ತಮ್ಮದೇ ಆದ ಬದುಕನ್ನು ರೂಪಿಸಿಕೊಳ್ಳಲು ಸಾಧ್ಯವೆಂದು ಫ್ರೀಡನ್ ಹೇಳುತ್ತಾಳೆ. ಪಿತೃಪ್ರಧಾನತೆ ಪ್ರಣೀತವಾದ ಸ್ತ್ರೀ ವ್ಯಕ್ತಿತ್ವದ ಸವಕಲು ಮಾದರಿಗಳನ್ನು ನಿರ್ಲಿಪ್ತವಾಗಿ ಮಹಿಳೆಯರು ಒಪ್ಪಿಕೊಳ್ಳುವುದನ್ನು ಫ್ರೀಡನ್ ಖಂಡಿಸುತ್ತಾಳೆ.

ನಮಗೆ ಲಭ್ಯವಿರುವ ಎಲ್ಲ ಸಾಧನಗಳನ್ನು ಬಳಸಿ ಮಹಿಳೆಯರನ್ನು ಕೇವಲ ಸಂತಾನೋತ್ಪತ್ತಿಯ ಜೈವಿಕ ಯಂತ್ರಗಳೆಂಬ ಘೋರತ್ವದಿಂದ ಮುಕ್ತರನ್ನಾಗಿಸುವುದು ಮತ್ತು ಮಗುವನ್ನು ಹೊತ್ತು ಹೆತ್ತು ಸಾಕುವ ಕೆಲಸವನ್ನು ಗಂಡು–ಹೆಣ್ಣುಗಳಿಬ್ಬರೂ ಸೇರಿದಂತೆ ಇಡೀ ಸಮಾಜವು ಭರಿಸುವಂತೆ ಹಂಚಿಕೆ ಮಾಡುವುದು ಎಂದು ವಾದಿಸುವ ಶುಲಾಮಿತ್ ಫೈರ್‌ಸ್ಟೆನ್, ಅಮೇರಿಕೆಯ ತೀವ್ರಗಾಮಿ ಚಿಂತಕಿ, ಆಕೆಯ 'The Dialectics of Sex' ಕೃತಿಯು ಮಹಿಳೆಯ ಜೀವಶಾಸ್ತ್ರೀಯ ಅಂಶವೇ ಆಕೆಯ ಶೋಷಣೆಗೆ ಕಾರಣ ಎಂದು ಸಾರುವ ಕೃತಿ. ವರ್ಗಭೇದಕ್ಕೆ ಆರ್ಥಿಕ ಕಾರಣವಿರುವಂತೆ ಲಿಂಗಭೇದಕ್ಕೆ ಜೈವಿಕ ಕಾರಣವಿದೆ ಎಂಬುದು ಫೈರ್‌ಸ್ಟನ್‌ಗಳ ಸಮರ್ಥನೆ ಅಲ್ಲದೇ ಗಂಡು–ಹೆಣ್ಣುಗಳ ನಡುವಿನ ಸಂತಾನೋತ್ಪತ್ತಿಯ ಕಾರಣದ ಸಹಜ ವ್ಯತ್ಯಾಸವು ಮೊದಲಿಗೆ ಶ್ರಮವಿಭಜನೆಗೆ ಕಾರಣವಾಯಿತಲ್ಲದೆ, ಆರ್ಥಿಕ, ಸಾಂಸ್ಕೃತಿಕ ವರ್ಗಗಳ ವಿಭಜನೆಗೂ ಕಾರಣವಾಯಿತು ಎಂಬುದು ಅವಳ ವಾದ.

ಆಧುನಿಕ ಮಹಿಳಾ ಚಳವಳಿಯ ಶಿಲ್ಪಿ ಕ್ಲಾರಾಜೆಟ್‌ಕಿನ್ ಎಂಬ ಅಮೆರಿಕನ್ ಮಹಿಳೆ. ಆಧುನಿಕ ಮಹಿಳೆಯರಿಗೆ ದೊಡ್ಡ ದನಿ ಕೊಟ್ಟವಳು. ಆಕೆ ಕ್ರಿ.ಶ. ೧೮೮೯ರಲ್ಲಿ ನಡೆದ ಕಾರ್ಮಿಕ ಸಮ್ಮೇಳನದಲ್ಲಿ ಕ್ಲಾರಾ ಮಹಿಳೆಯರಿಗೆ ಸಮಾನ ಹಕ್ಕಿನ ಘೋಷಣೆ ಮಾಡುತ್ತಾಳೆ. ೧೯೦೮ ಮಾರ್ಚ್ ೮ರಂದು ನ್ಯೂಯಾರ್ಕಿನ ಬಟ್ಟೆ ಗಿರಣಿಗಳಲ್ಲಿ ಕೆಲಸ ಮಾಡುತ್ತಿದ್ದ ಮಹಿಳಾ ಕಾರ್ಮಿಕರು ನ್ಯೂಯಾರ್ಕಿನ ರಸ್ತೆಗಳಲ್ಲಿ ಮೆರವಣಿಗೆ ನಡೆಸಿ ಪುರುಷನಿಗೆ ಸಮಾನವಾಗಿ ನಮಗೂ ವೇತನ ನೀಡಬೇಕು ಮತ್ತು ನಿರ್ದಿಷ್ಟ ಅವಧಿ ಮಾತ್ರ ಕೆಲಸ ಮಾಡಬೇಕು ಹಾಗೂ ನಮಗೂ ಪುರುಷರಂತೆ ಮತದಾನ ಮಾಡುವ ಹಕ್ಕನ್ನು ನೀಡಬೇಕೆಂದು ಹಕ್ಕೊತ್ತಾಯ ಮಾಡುತ್ತಾರೆ. ಈ ದಿನವೇ ಮುಂದೆ ಮಹಿಳಾ ದಿನಾಚರಣಾ ದಿನವಾಗಿ ಆಚರಣೆಗೆ ಬರುತ್ತದೆ.

ಇದೇ ಸಂದರ್ಭದಲ್ಲಿ ಜರ್ಮನಿಯಲ್ಲಿ ಮಹಿಳೆಯರು ಮನೆಯಿಂದ ಹೊರಬಂದು ಪುರುಷರಿಗೆ ಸವಾಲು ಹಾಕುತ್ತಾ, ನಮಗೆ ಒಂದು ದಿನ ವಿರಾಮ ಬೇಕು. ಆದ್ದರಿಂದ ಪುರುಷರೆಲ್ಲ ನಾವು ಮಾಡುತ್ತಿದ್ದ ಕೆಲಸ ಮಾಡಿ ನಾವು ವಿಶ್ರಾಂತಿ ತೆಗೆದುಕೊಳ್ಳುತ್ತೇವೆ. ನಾವು ಪ್ರತಿ ದಿನ ಮನೆಯಲ್ಲಿ ಏನೇನು ಕೆಲಸ ಮಾಡುತ್ತೇವೆಯೊ ಅಷ್ಟೂ ಕೆಲಸವನ್ನು ಪುರುಷರು ಮಾಡಿ ಎಂದು ಪ್ರತಿಭಟಿಸುತ್ತಾರೆ. ಬಹುಶಃ ಇದೊಂದು ಸಾಮಾನ್ಯ ಪ್ರತಿಭಟನೆಯಾಗಿ ಕಂಡರೂ ಅಸಾಮಾನ್ಯ ಪರಿಣಾಮವನ್ನು ಬೀರುತ್ತದೆ. ಪುರುಷರು ತಮ್ಮ ತಮ್ಮ ಜೀವನಕೌಶಲ್ಯಗಳ ಸಾಮರ್ಥ್ಯವನ್ನು

ಅರಿತುಕೊಳ್ಳಲು ಅವಕಾಶ ಮಾಡಿಕೊಡುತ್ತದೆ. ಮಹಿಳೆಯರ ಅನಿವಾರ್ಯತೆಯನ್ನು ಅರ್ಥಮಾಡಿಸುತ್ತದೆ.

ಸ್ತ್ರೀಶಕ್ತಿಯ ಹತ್ತಿಕ್ಕುವಿಕೆಯನ್ನು ನಿರ್ಮೂಲನಗೊಳಿಸುವಲ್ಲಿ ಮಹಿಳಾ ಚಳವಳಿ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸಿತು. ಆಶ್ಚರ್ಯದ ವಿಷಯವೆಂದರೆ ೧೯೦೮ರ ಕಾಲಕ್ಕೆ ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಬಾರದೆಂದು ಮಹಿಳಾ ಮತದಾನದ ಹಕ್ಕಿನ ವಿರುದ್ಧದ ಮಹಿಳಾ ಸಂಘ ಅಸ್ತಿತ್ವಕ್ಕೆ ಬಂದಿರುತ್ತದೆ. ಅಷ್ಟೇ ಅಲ್ಲದೆ ೧೯೦೯ರಲ್ಲಿ ಮಹಿಳಾ ಮತದಾನ ವಿರೋಧಿಸುವ ಪುರುಷರ ಸಂಘವು ಸ್ಥಾಪಿತವಾಗಿ ಈ ಎರಡೂ ಸಂಘಗಳೂ ಕ್ರಿಯಾಶೀಲವಾಗಿರುತ್ತವೆ. ಆದರೂ ಮಹಿಳೆಯರ ದಿಟ್ಟತನದ ಹೋರಾಟಕ್ಕೆ ಜಯ ದೊರೆಯುತ್ತದೆ.

ಮಹಿಳೆಯರು ತಮ್ಮ ಹಕ್ಕಿಗಾಗಿ ಹೋರಾಡುತ್ತಿದ್ದಾರೆ ಎಂದರೆ ಅದು ಪುರುಷರ ವಿರುದ್ಧದ ಹೋರಾಟವಲ್ಲ. ಒಟ್ಟಾರೆ ನಮ್ಮ ಸಾಂಸ್ಕೃತಿಕ ವ್ಯವಸ್ಥೆಯ ವಿರುದ್ಧದ ಹೋರಾಟ. ಸ್ತ್ರೀ ವಿಮೋಚನೆಯೆಂದರೆ ಪುರುಷರನ್ನು ದ್ವೇಷಿಸುವುದರ ಮೂಲಕ ಸಾಧಿಸುವುದಲ್ಲ. ಸ್ತ್ರೀ ತನ್ನ ವ್ಯಕ್ತಿತ್ವಕ್ಕೆ ಧಕ್ಕೆಯಾಗದಂತೆ ಸಹಬಾಳ್ವೆ ನಡೆಸುವುದು. ಇಂಥ ಸಹಬಾಳ್ವೆ ನಡೆಸಲು ಅನೇಕ ಅಡ್ಡಿ ಆತಂಕಗಳಿವೆ. ಈ ಅಡ್ಡಿಗಳು ಒಂದೇ ತೆರನಾಗಿಲ್ಲ. ಆದ್ದರಿಂದಲೇ ಸ್ತ್ರೀಪುರುಷರ ನಡುವೆ ಏರ್ಪಡುವ ಸಂಘರ್ಷಗಳಿಗೆ ನಿರ್ದಿಷ್ಟವಾದ, ಸಿದ್ಧರೂಪದ ಪರಿಹಾರಗಳಿಲ್ಲ. ಆದರೆ ಪರಿಹಾರವೇ ಇಲ್ಲ ಎಂಬಂತೆಯೂ ಇಲ್ಲ. ಎಲ್ಲಾ ಸಮಸ್ಯೆಗಳಿಗೂ ಸ್ತ್ರೀ ದೇಹವನ್ನೆ ವಿಭಜಿಸಿ ನೋಡುವ, ಕೊಲ್ಲುವ ಮೂಲಕವೇ ಪರಿಹಾರ ಕಂಡುಕೊಳ್ಳಬೇಕೆಂದು ಸಾಧಿಸುವ ಹಠಯೋಗಿಗಳು! ನಮ್ಮ ಸಮಾಜದಲ್ಲಿ ಸ್ತ್ರೀ-ಪುರುಷರೆಂಬ ಭೇದವಿಲ್ಲದೆ ಇದ್ದಾರೆ.

ಜಾಗತಿಕ ಮಟ್ಟದಲ್ಲಿ ಮಹಿಳಾ ಚಳವಳಿಗಳು ನಡೆಯುತ್ತಿದ್ದಾಗ ಭಾರತದಲ್ಲಿ ರಾಷ್ಟ್ರೀಯ ಚಳವಳಿ ನಡೆಯುತ್ತಿತ್ತು. ವಸಾಹತು ಆಳ್ವಿಕೆಯ ವಿರುದ್ಧದ ಹೋರಾಟವನ್ನು ಗಾಂಧಿ ನೇತೃತ್ವದಲ್ಲಿ ನಡೆಸುತ್ತಿದ್ದಾಗ ಮಹಿಳೆಯರೂ ಬೃಹತ್ ಸಂಖ್ಯೆಯಲ್ಲಿ ಸ್ವರಾಜ್ಯಾಂದೋಲನದಲ್ಲಿ ಭಾಗವಹಿಸಿದರು. ೧೯೨೧ರಲ್ಲಿ ಅಸಹಕಾರ ಚಳವಳಿಯಲ್ಲಿ ಭಾಗವಹಿಸುವಂತೆ ಗಾಂಧೀಜಿ ಕರೆ ನೀಡಿದರು. "ನಾನು ಹೆಂಗಸಾಗಿ ಹುಟ್ಟಿದ್ದರೆ ಹೆಣ್ಣನ್ನು ಆಟಿಕೆಯೆಂದು ತಿಳಿಯುವ ಗಂಡಸಿನ ಎಲ್ಲಾ ವರ್ತನೆಗಳ ವಿರುದ್ಧದ ಸಿಡಿದೇಳುತ್ತಿದ್ದೆ" ಎಂದು ಗಾಂಧೀಜಿ ತಮ್ಮ ಸ್ತ್ರೀಪರತೆಯನ್ನು ಪ್ರಕಟಿಸಿದರು. ಬ್ರಿಟಿಷರ ವಸ್ತುಗಳ ಬಹಿಷ್ಕಾರ, ನೂಲುವುದು, ನೇಯುವುದು, ಖಾದಿ ಬಟ್ಟೆ ಧರಿಸುವುದು ಇತ್ಯಾದಿ

ಅಹಿಂಸಾ ಹೋರಾಟದಲ್ಲಿ ಗಾಂಧೀಜಿಯವರೊಂದಿಗೆ ಅಪಾರ ಸಂಖ್ಯೆಯ ಮಹಿಳೆಯರೂ ಪಾಲ್ಗೊಂಡರು. ಹೀಗಾಗಿ ಭಾರತೀಯ ಮಹಿಳೆಯರ ಸಂಘಟನೆಗೆ ರಾಷ್ಟ್ರೀಯ ಚಳವಳಿ ಅನುವು ಮಾಡಿಕೊಟ್ಟಿತು.

ಆಧುನಿಕ ಭಾರತೀಯ ಮಹಿಳೆಯರು ಸಂಘಟನೆಗೊಂಡಿದ್ದೇ ರಾಷ್ಟ್ರೀಯ-ವಾದದ ಹಿನ್ನೆಲೆಯಲ್ಲಿ. ಶ್ರಮದ ಪ್ರಜ್ಞೆಯಲ್ಲಿ ಮೊದಲಿಗೆ ಸ್ತ್ರೀಯರು ಸಂಘಟಿತ-ರಾಗಿರಲಿಲ್ಲ. ಆದರೆ ಬಹುಬೇಗ ಕಾರ್ಮಿಕರ ಶೋಷಣೆಯ ಬಗ್ಗೆ ಪ್ರತಿಭಟನೆಗೆ ಇಳಿದಿದ್ದು ಕಂಡುಬರುತ್ತದೆ. ಎಲ್ಲಿಯೂ ಅಸಂಘಟಿತ ಮಹಿಳೆಯರು ನ್ಯಾಯ ದೊರಕಿಸಿಕೊಳ್ಳಲು ಹೋರಾಡಿದ್ದು ಕಂಡುಬರುವುದಿಲ್ಲ. ಇದಕ್ಕೆ ಕಾರಣ ಇಲ್ಲದಿಲ್ಲ. ಸ್ತ್ರೀವಾದದ ಶೋಧನೆಗಳು ಕುಟುಂಬದ ನೆಲೆಯಲ್ಲಿ ಹುಡುಕಾಟ ನಡೆಸುತ್ತಿದ್ದುದರಿಂದ ಆಧುನಿಕ ಪ್ರಗತಿಪರ ಸ್ತ್ರೀ ಚಳವಳಿಗಳಿಗೂ ಸಹ ಕೌಟುಂಬಿಕ ಕಟ್ಟುಪಾಡುಗಳ ಬಿಡುಗಡೆಯನ್ನೆ ಪ್ರಧಾನವಾಗಿ ಗ್ರಹಿಸಿದವು.

ಮಹಿಳೆಯರ ಮೇಲಿನ ಹಿಂಸೆಗಳು ದಿನೇ ದಿನೇ ಹೆಚ್ಚುತ್ತಲೇ ಇವೆ. ಆ ಹಿಂಸೆಗಳನ್ನು ಹತ್ತಿಕ್ಕುವ ಕಾನೂನುಗಳೂ ರಚನೆಯಾಗುತ್ತಲೇ ಇವೆ. ಹೀಗಾಗಿ ಯುದ್ಧ -ಪ್ರತಿಯುದ್ಧದಂತೆ ಸಾಮಾಜಿಕ ನಡಿಗೆ ಸಾಗುತ್ತಲೇ ಇದೆ. ಇದು ಸ್ತ್ರೀಯರ ಮೇಲಿನ ಹಿಂಸೆಗಳೂ ನಿಲ್ಲುವವರೆಗೂ ಸಾಗುತ್ತಲೇ ಇರಬೇಕಾದ ಅನಿವಾರ್ಯತೆಯೂ ಇದೆ. ಆದ್ದರಿಂದ ಮಹಿಳೆ ಮತ್ತು ಅಭಿವೃದ್ಧಿ ಸಾರ್ವಜನಿಕ ರಂಗದಲ್ಲಿ ಹೆಚ್ಚು ಚರ್ಚಿತ-ವಾಗುತ್ತಿದೆ. ಆರ್ಥಿಕ ಅಭಿವೃದ್ಧಿಯಿಂದಲೇ ಮಹಿಳೆಯರ ಎಲ್ಲ ಸಂಕೋಲೆಗಳನ್ನು ಕಳಚಿಹಾಕಲು ಸಾಧ್ಯವಾಗದು ಎಂಬುದು ಮನವರಿಕೆಯಾಯಿತು. ಕಾನೂನುಗಳು ಸಹ ಮಹಿಳೆಯನ್ನು ಸಂತೋಷವಾಗಿಡಲಾರವು ಎಂಬುದು ಮನದಟ್ಟಾಯಿತು. ಹಾಗಾದರೆ ಮಹಿಳೆಯರ ಸಮಸ್ಯೆಗಳು ಆರ್ಥಿಕಾಭಿವೃದ್ಧಿಯಾಚೆಯೂ ಇವೆ. ಕಾನೂನುಗಳು ಸಹ ಮಹಿಳೆಯನ್ನು ಸಂತೋಷವಾಗಿಡಲಾರವು ಎಂಬುದು ಮನದಟ್ಟಾಯಿತು. ಹಾಗಾದರೆ ಮಹಿಳೆಯರ ಸಮಸ್ಯೆಗಳು ಆರ್ಥಿಕಾಭಿವೃದ್ಧಿಯಾಚೆಯೂ ಇವೆ. ಕಾನೂನು ರಕ್ಷಣೆಯಾಚೆಯೂ ಇವೆ ಎಂಬುದನ್ನು ಸ್ಪಷ್ಟಪಡಿಸಿಕೊಂಡ ಮಹಿಳಾ ಹೋರಾಟಗಾರರು ಸಾಮಾಜಿಕ ರಚನೆಯ ಸ್ವರೂಪದಲ್ಲಿಯೇ ಹಿಂಸೆಯ ರುದ್ರ ನರ್ತನವಿರುವುದನ್ನು ಮನಗಂಡು ಅದರ ವಿರುದ್ಧ ಹೋರಾಟ ಆರಂಭಿಸಿದರು.

ಪುರುಷ ಪ್ರಧಾನತೆಯನ್ನು ಹೋಗಲಾಡಿಸುವಲ್ಲಿ ಪುರುಷರೂ ಮಹಿಳೆ-ಯರೊಂದಿಗೆ ಕೈಜೋಡಿಸಬೇಕೆಂಬ ಅಭಿಪ್ರಾಯಕ್ಕೆ ಬರಲಾಯಿತು. ಸಾಮಾಜಿಕ ಶಾಂತಿ

ಮತ್ತು ಮಾನವ ಸಂಪನ್ಮೂಲದ ಅಭಿವೃದ್ಧಿ ಜತೆಯಾಗಿ ಸಾಗಲು ಮನುಷ್ಯರೆಲ್ಲರ ಪ್ರಯತ್ನವಾಗಬೇಕೆಂದು ತೀರ್ಮಾನವಾಯಿತು. ಈ ಹಿನ್ನೆಲೆಯಲ್ಲಿ ಮಹಿಳಾ ಸಾಂಸ್ಕೃತಿಕ ಚಳವಳಿಯಲ್ಲಿ ಮೆಕ್ಸಿಕೋ ಸಮಾವೇಶ ಅತ್ಯಂತ ಮಹತ್ವಪೂರ್ಣ ಸಮಾವೇಶವೆನಿಸಿದೆ. ಶೋಷಣೆಗೆ ಒಳಗಾದ ಮಹಿಳೆಯರು ಸುಸ್ಥಿತಿಯಲ್ಲಿರುವ ಮಹಿಳೆಯರೂ ಒಟ್ಟಾಗಿ ಸೇರಿಯೇ ಪುರುಷರನ್ನೂ ಜೊತೆಗೂಡಿಸಿಕೊಂಡು ಮಹಿಳಾ ವಿಮೋಚನೆಯ ಸಾಮಾಜಿಕ ಬದಲಾವಣೆಗೆ ಹೋರಾಡಬೇಕೆಂದು ಆ ಸಂದರ್ಭದಲ್ಲಿ ನಿರ್ಧರಿಸ-ಲಾಯಿತು.

ಇಪ್ಪತ್ತನೆ ಶತಮಾನದ ಅರವತ್ತರ ದಶಕದಿಂದ ಸ್ತ್ರೀವಾದದ ತಾತ್ವಿಕ ಚರ್ಚೆಗಳು ಆರಂಭವಾದವು. ಸ್ತ್ರೀವಾದಿ ಚಳವಳಿಗಳಲ್ಲಿ ಮಹಿಳೆಯರು ಆಧುನಿಕ ಅರಿವಿನಿಂದ ಪ್ರವೇಶಿಸಿದ ಮೇಲೆ ಸ್ತ್ರೀವಾದಕ್ಕೆ ಹೊಸ ತೀವ್ರತೆ ಬಂತು. ಆದರೆ ಪುರುಷಮುಖಿ ಸಮಾಜ, ಸ್ತ್ರೀವಾದದ ತಾತ್ವಿಕತೆಯನ್ನು ಒಪ್ಪಿಕೊಳ್ಳಲು ಸಿದ್ಧವಿರಲಿಲ್ಲ. ಅದಕ್ಕೆ ಕಾರಣ ಸಹಸ್ರಾರು ವರ್ಷಗಳಿಂದ ಸ್ಥಾಪಿತಗೊಂಡಿದ್ದ ಸಾಂಪ್ರದಾಯಿಕ 'ಪಾಚಿ'ಯನ್ನು ತಿಕ್ಕಿ ತೊಳೆಯುವುದು ಅಷ್ಟು ಸುಲಭವಾಗಿರಲಿಲ್ಲ. ಆದರೆ ಪಾಚಿಯನ್ನು ತೊಳೆಯಬೇಕಾದರೆ ಝಾಡಿಸಿ ತಿಕ್ಕಬೇಕು. ಆ ರೀತಿ ತಿಕ್ಕುವ ಕೆಲಸವನ್ನು ಮಾಡಿದ್ದು ಪಶ್ಚಿಮದ ಸ್ತ್ರೀವಾದಿ ಪಂಥಗಳು. ಅವುಗಳೆಂದರೆ ತೀವ್ರಗಾಮಿ ಸ್ತ್ರೀವಾದ, ಸಾಂಸ್ಕೃತಿಕ ಸ್ತ್ರೀವಾದ, ಲೆಸ್ಬಿಯನ್ ಸ್ತ್ರೀವಾದ, ಅಮೇರಿಕಾದ ಸ್ತ್ರೀವಾದ, ಮಾರ್ಕ್ಸ್‌ವಾದಿ ಸ್ತ್ರೀವಾದ ಸಮಾಜವಾದಿ ಸ್ತ್ರೀವಾದ, ಫ್ರೆಂಚ್ ಸ್ತ್ರೀವಾದ , ಕಪ್ಪು ಸ್ತ್ರೀವಾದ, ಉದಾರವಾದಿ ಸ್ತ್ರೀವಾದ ಮತ್ತು ಭಾರತೀಯ ಸ್ತ್ರೀವಾದಗಳು.

ಸ್ತ್ರೀನಿಷ್ಠ ಸಾಂಸ್ಕೃತಿಕ ಚಳವಳಿಗೆ ತೀವ್ರಗಾಮಿ ಸ್ತ್ರೀವಾದದ ಕಾಣಿಕೆ ಅಪಾರವಾದದ್ದು. ತೀವ್ರಗಾಮಿಗಳ ಎಲ್ಲಾ ವಾದಗಳನ್ನು ಒಪ್ಪದಿರಬಹುದು. ಆದರೆ ಅವರ ಅನೇಕ ಅಭಿಪ್ರಾಯಗಳು ಚಿಂತನಯೋಗ್ಯವಾಗಿವೆ. ಜೀವಶಾಸ್ತ್ರೀಯ ಭಿನ್ನತೆಯಿಂದಲೆ ಮಹಿಳೆಯು ಅಧೀನಳಾಗಿದ್ದಾಳೆ ಎಂಬುದು. ಮೈನೆರೆಯುವುದು, ಮುಟ್ಟಾಗುವುದು, ಲೈಂಗಿಕ ಅಪೇಕ್ಷೆ, ಗರ್ಭಧಾರಣೆ, ಹೆರಿಗೆ ಸ್ತನ್ಯಪಾನ, ಮುಟ್ಟು ನಿಲ್ಲುವುದು ಇತ್ಯಾದಿಗಳು ಹೆಣ್ಣಿಗೇ ಮಾತ್ರವೇ ವಿಶೇಷವಾದ ಜೀವಶಾಸ್ತ್ರೀಯ ಪ್ರಕ್ರಿಯೆಗಳು. ಈ ಕಾರಣಗಳಿಂದಲೇ ಮಹಿಳೆ ಪುರುಷನ ಅವಲಂಬಿಯಾಗಿದ್ದಾಳೆ. ಪುರುಷ ಕೂಡ ಹೆಣ್ಣಿನ ದೌರ್ಬಲ್ಯ ಎಂಬಂತೆ ಇದನ್ನು ಪರಿಭಾವಿಸುತ್ತಾನೆ. ಆದರೆ

ಹೆಣ್ಣಿನ ಮೌಲ್ಯವನ್ನು ಎತ್ತಿಹಿಡಿಯುವ ಪ್ರಬಲ ಶಕ್ತಿಗಳಿವು ಎಂಬುದನ್ನು ಕೀರ್ತಿಸಿದ್ದು ತೀವ್ರಗಾಮಿಗಳ ಕೊಡುಗೆ.[೧]

ಲೈಂಗಿಕ ದಾಸ್ಯ ಮತ್ತು ಒತ್ತಾಯದ ತಾಯ್ತನಗಳ ತಾಣ ಕುಟುಂಬ ವ್ಯವಸ್ಥೆ. ಅದೇ ಮಹಿಳೆಯ ಶೋಷಣೆಯ ಕೀಲಿಕೈ ಎಂಬುದು ತೀವ್ರಗಾಮಿಗಳವಾದ. ಇದರಿಂದ ಮಹಿಳೆ ಕುಟುಂಬದ ಒಳಗೆ ಉಳಿಯುವಳಲ್ಲದೆ ಲಿಂಗಾಧಾರಿತ ಶ್ರಮವಿಭಜನೆಯನ್ನು ಪ್ರಶ್ನಿಸದೆ ಒಪ್ಪಿ ನಡೆಯುವ ಅನಿವಾರ್ಯತೆಯಿಂದ ಬದುಕುತ್ತಾಳೆ. ಸ್ತ್ರೀ ಶೋಷಣೆಯ ಕೇಂದ್ರವೇ ಕುಟುಂಬ ಎಂದು ತೀವ್ರಗಾಮಿಗಳು ಹೇಳುತ್ತಾರೆ. ಮೇರಿ ಡಾಲಿ ಮತ್ತು ಸೂಸನ್ ಗ್ರಿಫಿನ್‌ರ ವಾದವೆಂದರೆ ಮಹಿಳೆಯರನ್ನು ಪುರುಷರಿಗೆ ಅಧೀನವಾಗಿಸದ ಹೊಸ ವ್ಯವಸ್ಥೆ ರೂಪಿಸಬೇಕೆಂಬುದು. ಏಕೆಂದರೆ ಪುರುಷಾಧಿಪತ್ಯದ ಅಧಿಕಾರವು ಹಿಂಸೆ, ದಬ್ಬಾಳಿಕೆ ಮತ್ತು ವಿನಾಶಗಳನ್ನು ಸ್ತ್ರೀಯರ ಮೇಲೆ ಸ್ತ್ರೀತ್ವವನ್ನು ಹತ್ತಿಕ್ಕುವ ಮೂಲಕ ತನ್ನ ಮೇಲುಗೈ ಸಾಧಿಸುತ್ತಿದೆ. ಮಹಿಳೆಯರನ್ನು ಮಾಟಗಾರ್ತಿಯರೆಂದು ಹಿಂಸಿಸಿ ಕೊಲ್ಲುವುದು, ಚೀನಿಯರಲ್ಲಿ ಕಂಡುಬರುವ ಮಹಿಳೆಯರ ಪಾದ ಬಂಧನ, ಭಾರತದಲ್ಲಿನ ಸತಿ ಪದ್ಧತಿ ಇಂಥ ವಿನಾಶಾತ್ಮಕ ಆಕ್ರಮಣಗಳು ಪುರುಷಾಧಿಕಾರತ್ವದ ರೂಪಗಳು ಎಂಬುದು ಮೇರಿ ಡಾಲಿಯ ವಾದ.

ಪಿತೃಪ್ರಧಾನ ಸಮಾಜ ಮಹಿಳೆಯ ವೈಯಕ್ತಿಕತೆಯನ್ನು ವಿಕೃತಗೊಳಿಸಿದ್ದು ಆ ಸ್ಥಿತಿಯಿಂದ ಮಹಿಳೆ ಬಿಡುಗಡೆ ಹೊಂದಲು ಪ್ರತ್ಯೇಕ ಮಹಿಳಾ ಸಂಸ್ಕೃತಿಯೇ ರೂಪ ಪಡೆಯಬೇಕು ಎಂದು ತೀವ್ರಗಾಮಿಗಳು ಅಭಿಪ್ರಾಯಪಡುತ್ತಾರೆ. ಆದರೆ ಈ ಅಭಿಪ್ರಾಯ ಪುರುಷ ಪ್ರಾಧಾನ್ಯವನ್ನು ವಿರೋಧಿಸುವ ಸ್ತ್ರೀಯರ ಪ್ರತ್ಯೇಕತೆಯನ್ನು ನಿರ್ಮಿಸುವ ಆಶಯವನ್ನೇ ಪ್ರತಿಪಾದಿಸುತ್ತದೆ. ಈ ಪ್ರತ್ಯೇಕೀಕರಣ ಕೂಡ ಮೌಲ್ಯವಾಗಲಾರದು. ಆದರೆ ಮಹಿಳಾ ಸಂಸ್ಕೃತಿಯ ಶೋಧನೆಗೆ ಮಹಿಳಾವಾದಿಗಳನ್ನು ತೊಡಗಿಸಿದ್ದು ತೀವ್ರಗಾಮಿ ಸ್ತ್ರೀವಾದ ಎಂಬುದು ಚಾರಿತ್ರಿಕ ಸತ್ಯ. ಅಷ್ಟೇ ಸತ್ಯವಾದ ಮತ್ತೊಂದು ಸಂಗತಿಯೆಂದರೆ ಮಹಿಳಾ ವಿರೋಧಿ ಸಾಂಸ್ಕೃತಿಕ ಪರಿಸರದಲ್ಲಿ ಸ್ತ್ರೀಯರು ತಮ್ಮ ವಿಶಿಷ್ಟತೆ ಮತ್ತು ಶ್ರೇಷ್ಠತೆಯನ್ನು ಸಾರಲು ಪ್ರತ್ಯೇಕವಾದ ರಾಜಕೀಯದ ಅಗತ್ಯವನ್ನು ತೀವ್ರಗಾಮಿ ಸ್ತ್ರೀವಾದಿಗಳು ಸಾಧಿಸಲು ಹೊರಟರು.

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೨೬೩–೩೩೫. ಕರ್ತೃ: ಡಾ. ಹಾಲತಿ ಸೋಮಶೇಖರ್.

ಸಾಂಸ್ಕೃತಿಕ ಸ್ತ್ರೀವಾದಿಗಳು ಮಹಿಳೆಯ ಅಸಹಾಯಕತೆಗೆ ತಮ್ಮದೇ ಆದ ವಿವರಣೆ ನೀಡುತ್ತಾರೆ. ನಮ್ಮ ಸಾಮಾಜಿಕ, ಆರ್ಥಿಕ, ಸಾಂಪ್ರದಾಯಿಕ ಮತ್ತು ಸಾಂಸ್ಕೃತಿಕ ವ್ಯವಸ್ಥೆಯೇ ಮಹಿಳೆಯರ ದಮನದ ಮೂಲಗಳು ಎಂಬುದು ಅವರ ವಾದ. ತೀವ್ರಗಾಮಿ ಸ್ತ್ರೀವಾದಿ ಪ್ರತಿಪಾದಕರಾದ ಮೇರಿ ಡಾಲಿ ಮತ್ತು ಆಡ್ರಿಯನ್ ರಿಚ್ ಸಾಂಸ್ಕೃತಿಕ ಸ್ತ್ರೀವಾದದ ಪ್ರತಿಪಾದಕರಾಗಿದ್ದಾರೆ. ಮೇರೆ ಡಾಲಿ ಹೇಳುವುದೆಂದರೆ "ಸ್ತ್ರೀ ಶಕ್ತಿ ಎನ್ನುವುದು ಮೂಲದಲ್ಲಿ ಜೀವಪ್ರೇಮವೇ ಆಗಿದ್ದು ಅದರ ಬಹುಮುಖ್ಯ ನೆಲೆಯಾಗಿರುವ ಸ್ತ್ರೀ ಶರೀರವು ಜೀವ ವಿರೋಧಿಯಾದ ನಿರಂತರ ಆಕ್ರಮಣಕ್ಕೆ ಮೊದಲು ಗುರಿಯಾಗುತ್ತದೆ. ಜೀವ ಪ್ರೇಮವುಳ್ಳ, ಸ್ತ್ರೀ ಶಕ್ತಿಯನ್ನು ಮತ್ತೆ ಗಳಿಸಿಕೊಳ್ಳುವ ಹೋರಾಟವೇ ಸಾಂಸ್ಕೃತಿಕ ಸ್ತ್ರೀವಾದ" ಎಂಬುದು ಅವರ ಅಭಿಪ್ರಾಯ. ಪುರುಷ ಮತ್ತು ಪುರುಷನ ಜೀವಶಾಸ್ತ್ರವೇ ಮಹಿಳೆಯ ನಿಜವಾದ ಶತ್ರು ಎಂಬುದು ಇವರ ವಾದ. ಹೆಣ್ಣಿನ ಮೂಲಸತ್ವವನ್ನು ಎತ್ತಿ ಹಿಡಿಯುವ ತಾತ್ವಿಕ ಮತ್ತು ವೈಚಾರಿಕ ವಾದವನ್ನು ಸಾಂಸ್ಕೃತಿಕ ಸ್ತ್ರೀವಾದಿಗಳು ಮಂಡಿಸಿದರು. ಸಂತಾನವನ್ನು ಹೆರದ ಪುರುಷನ ಬಂಜೆತನವು ಸಂತಾನ ಹೆರುವ ಸ್ತ್ರೀ ಶಕ್ತಿಯ ಮೇಲೆ ಅವಲಂಬಿತನನ್ನಾಗಿ ಮಾಡುತ್ತದೆ. ಈ ಶಕ್ತಿಯು ಸ್ತ್ರೀಯರ ಜೀವಪರತೆ, ಜೀವಸೃಷ್ಟಿ ಮೂಲಕ ಜೀವಶಾಸ್ತ್ರೀಯ ಪರಿಸ್ಥಿತಿಯಿಂದ ಹುಟ್ಟುವ ಚೈತನ್ಯ ಪ್ರವಾಹ. ಸ್ತ್ರೀ ಶಕ್ತಿಯನ್ನು ಮುಕ್ತವಾಗಿಸುವುದರ ಮೂಲಕವೇ ಮಹಿಳೆ ತನ್ನ ಸೃಜನಶೀಲ ಅಭಿವ್ಯಕ್ತಿಯನ್ನು ಸಾಧಿಸಬಹುದು. ಇಂಥ ಸ್ಥಿತಿಯಲ್ಲಿ ಮಾತ್ರ ಮಹಿಳೆಯ ನೈಸರ್ಗಿಕ ಗುಣಗಳೆನಿಸಿರುವ ಪ್ರೇಮ, ಸ್ವಪ್ಟ್ಯಾತ್ಮಕತೆ, ಸಂರಕ್ಷಣಾ ಶೀಲತೆಗಳು ಜೀವಂತವಾಗಿ ಉಳಿಯಬಲ್ಲವು ಎಂಬುದಾಗಿ ಸಾಂಸ್ಕೃತಿಕ ಸ್ತ್ರೀವಾದ ನಿರೂಪಿಸುತ್ತದೆ.

ಸಾಂಸ್ಕೃತಿಕ ಸ್ತ್ರೀವಾದವನ್ನು ಸಾರ್ವತ್ರೀಕರಿಸುವುದು ಸಾಧ್ಯವಾಗದ ಮಾತು. ಅಲ್ಲದೆ ಸ್ತ್ರೀತ್ವದ ವಿಜೃಂಭನೆಯ ತಳಹದಿಯ ಮೇಲೆ ಸ್ತ್ರೀವಾದಿಗಳು ರೂಪಿಸಿರುವ ಈ ಸಿದ್ಧಾಂತವು ಪಶ್ಚಿಮ ದೇಶಗಳ ಬಿಳಿಯ ಸ್ತ್ರೀವಾದಿಗಳಿಂದ ರಚಿತವಾಗಿರುವಂಥದ್ದು. ಆದ್ದರಿಂದ ವೈವಿಧ್ಯಮಯ ಸಂಸ್ಕೃತಿಯುಳ್ಳ ಜಗತ್ತಿನ ನೂರಾರು ದೇಶಗಳಲ್ಲಿ ಹುಟ್ಟುವ ಸ್ತ್ರೀವಾದಿ ಪರಿಕಲ್ಪನೆಗಳೇ ಬೇರೆ ಬಗೆಯಾಗಿವೆ. ಚೆರ್ರಿ ಮೊರಾಗಳು ಹೇಳಿರುವ ಅಭಿಪ್ರಾಯಗಳು ಸ್ತ್ರೀಶೋಷಣೆಯ ಸಂಕೀರ್ಣತೆ ಮತ್ತು ವಿರೋಧಾಭಾಸಗಳನ್ನು ಚಿತ್ರವತ್ತಾಗಿ ನೀಡುತ್ತದೆ.

ಮೇರೆ ಡಾಲಿ, ಆಡ್ರಿಯನ್ ರಿಚ್, ಸುಸನ್‌ಗ್ರಿಫೆನ್, ಕ್ಯಾಥ್ಲೀನ್ ಬ್ಯಾರಿ, ರಾಬಿನ್ ಮೋರ್ಗಾನ್ ಮೊದಲಾದವರು ಸಾಂಸ್ಕೃತಿಕ ಸ್ತ್ರೀವಾದ ಪ್ರತಿವಾದಕರು. ಸಾಂಸ್ಕೃತಿಕ

ಸ್ತ್ರೀವಾದದ ತಾತ್ವಿಕ ಚಿಂತನೆ ನಡೆಸಿದ ಈ ಸ್ತ್ರೀವಾದಿಗಳು ಅದರ ಇತಿಮಿತಿಗಳನ್ನು ಗುರುತಿಸಿದ್ದಾರೆ. ಮಹಿಳೆಯದೇ ಆದ ಸಂಸ್ಕೃತಿಯೊಂದನ್ನು ಅರ್ಥ ಮಾಡಿಕೊಂಡು ಒಟ್ಟು ಸಂಸ್ಕೃತಿಯಲ್ಲಿ ಶೋಧಿಸಿಕೊಂಡು ಅದನ್ನು ಪೋಷಿಸಿ, ಕಾಪಾಡಿ-ಕೊಳ್ಳಬೇಕೆಂಬುದು ಈ ಸ್ತ್ರೀವಾದಿಗಳ ಆಶಯ. ಅದೇ ಮಹಿಳೆಯರ ವಿಮೋಚನೆ ಎಂಬುದು ಅವರ ವಾದ. ಆದರೆ ಈ ಆಶಯದ ಹಿಂದೆ ಅಪಾಯವೂ ಇದೆ. ಸ್ತ್ರೀಯ ವಿಶಿಷ್ಟ ಲಕ್ಷಣಗಳನ್ನು ಗುರುತಿಸಿಕೊಂಡು ಅದನ್ನೇ ವೈಭವೀಕರಿಸಿಕೊಳ್ಳುತ್ತಾ ಹೋಗುವುದು ಲಿಂಗತಾರತಮ್ಯದ ನಿವಾರಣೆಗಿಂತ ಲಿಂಗತಾರತಮ್ಯವನ್ನೇ ಉಳಿಸಿಕೊಳ್ಳಲು ಹೋರಾಟ ಮಾಡಿದಂತಾಗುತ್ತದೆ.

ಆಧುನಿಕ ಸಮಾಜವನ್ನು ಸೈದ್ಧಾಂತಿಕ ನೆಲೆಯಲ್ಲಿ ವಿಶ್ಲೇಷಿಸಿದ ಸಿದ್ಧಾಂತವೆಂದರೆ ಮಾರ್ಕ್ಸ್‌ವಾದ, ಅರ್ಥಾತ್ ಸಮಾಜವಾದ, ವರ್ಗಸಂಘರ್ಷ ಮತ್ತು ಉತ್ಪಾದನೆ, ಹಂಚಿಕೆ ವಿಷಯಗಳಲ್ಲಿ ಮಾನವೀಯತೆಯನ್ನು ಮೆರೆಯುವ ಈ ಸಿದ್ಧಾಂತ ಸ್ತ್ರೀಯರ ವಿಷಯದಲ್ಲೂ ಅತ್ಯಂತ ಆಸಕ್ತಿಯನ್ನು ತೋರಿದೆ. ಮಾರ್ಕ್ಸ್ ಮತ್ತು ಏಂಗೆಲ್ಸ್‌ರು ಸ್ತ್ರೀಯರ ಅಧೀನ ಸ್ಥಿತಿಗೆ ಅವರು ಆರ್ಥಿಕ ಉತ್ಪಾದನೆಯಿಂದ ದೂರ ಉಳಿದಿರುವುದೇ ಕಾರಣವಾಗಿದೆ ಎಂಬುದನ್ನು ಪ್ರತಿಪಾದಿಸಿದರು; ಈ ಸಮಾಜವಾದಿಗಳು ಮಹಿಳೆಯರು ಉತ್ಪಾದನಾ ವ್ಯವಸ್ಥೆಯಲ್ಲಿ ತೊಡಗಿಕೊಳ್ಳುವುದೇ ಎಲ್ಲಾ ಬಗೆಯ ಶೋಷಣೆಯಿಂದ ವಿಮೋಚನೆ ಎಂದು ಸಾರಿದರು.

ಜೂಲಿಯೆಟ್ ಮಿಶೆಲ್, ಶೀಲಾ ರೋಬಾತಮ್, ಮಿಶೆಲ್ ಬ್ಯಾರೆಟ್ ಮುಂತಾದವರು ಮಾರ್ಕ್ಸಿಸ್ಟ್ ಸ್ತ್ರೀವಾದವನ್ನು ಬೆಳೆಸಿದವರಲ್ಲಿ ಪ್ರಮುಖರು. ಅವರ ಪ್ರಕಾರ ಮನೆಯಲ್ಲಿನ ಮಹಿಳೆಯ ದುಡಿಮೆಗೆ ಯಾವ ಮಹತ್ವವೂ ಇಲ್ಲ. ಹೊರಗೆ ದುಡಿಯಲು ಸಂತಾನೋತ್ಪತ್ತಿ ಕಾರ್ಯವು ಅಡ್ಡಿಮಾಡುತ್ತದೆ. ಈ ಕಾರಣಕ್ಕಾಗಿಯೇ ಮಹಿಳೆಯರು ಅರೆಕಾಲಿಕ ವೃತ್ತಿಗೆ ಅಥವಾ ತಮ್ಮ ಪ್ರತಿಭೆ, ಕುಶಲತೆ, ನೈಪುಣ್ಯತೆಗೆ ಪೂರಕವಲ್ಲದ ವೃತ್ತಿಯನ್ನು ಕೈಗೊಳ್ಳುತ್ತಾರೆ. ಆಧುನಿಕ ಸಂತಾನ ನಿಯಂತ್ರಣ ವಿಧಾನಗಳು ಉತ್ಪಾದನೆ ಮತ್ತು ಸಂತಾನೋತ್ಪತ್ತಿಗೆ ಸಂಬಂಧಿಸಿದ ಬದಲಾವಣೆಗಳನ್ನು ತರಬಲ್ಲವು ಎಂಬುದಾಗಿದೆ. ಆದರೆ ಪುರುಷ ಪ್ರಧಾನತೆಯ ಸಾಂಸ್ಕೃತಿಕ ಅಂಶಗಳು ಬದುಕಿನಲ್ಲಿ ಸೇರಿಕೊಂಡಿರುವುದರಿಂದ ಬದಲಾವಣೆ ಮಾನಸಿಕ ವಿಕಾಸವನ್ನು ಅಪೇಕ್ಷಿಸುತ್ತದೆ. ಆದ್ದರಿಂದ ಬಂಡವಾಳಶಾಹಿಗಳನ್ನೇ ನಿರ್ಮೂಲನೆ ಮಾಡಬೇಕೆಂಬ ಕಾರ್ಮಿಕರ ಹೋರಾಟದಂತೆ ಸ್ತ್ರೀಯರ ಹೋರಾಟವಿಲ್ಲ ಅಥವಾ ಸ್ತ್ರೀಯರ ಅಧೀನ

ಸ್ಥಿತಿಗೆ ಪುರುಷರೆ ಕಾರಣ. ಆದ್ದರಿಂದ ಪುರುಷರನ್ನು ನಿರ್ನಾಮ ಮಾಡುವುದರಿಂದ ಸ್ತ್ರೀಯರ ವಿಮೋಚನೆ ಸಾಧ್ಯ ಎಂಬ ಸರಳ ತೀರ್ಮಾನವೂ ಸಾಧ್ಯವಿಲ್ಲ. ಆದ್ದರಿಂದ ಮಾರ್ಕ್ಸ್‌ವಾದಿ ನೆಲೆ ಕೂಡ ಸ್ತ್ರೀ ವಿಮೋಚನೆಯ ದೃಷ್ಟಿಯಲ್ಲಿ ಕೆಲವು ಮಿತಿಗಳಲ್ಲಿಯೇ ವ್ಯವಹರಿಸುತ್ತದೆ.

ಕಪ್ಪು ಸ್ತ್ರೀವಾದದ ಮೂಲ ಪ್ರೇರಣೆ ವರ್ಣ ತಾರತಮ್ಯ. ಇದು ಲಿಂಗ ತಾರತಮ್ಯದಷ್ಟೆ ಅಪಾಯಕಾರಿಯಾದ, ಅಮಾನವೀಯ ದೌರ್ಜನ್ಯ. ಬಿಳಿಯರು ಕರಿಯರ ಮೇಲೆ ನಡೆಸುವ ದಬ್ಬಾಳಿಕೆಯಿಂದ ಕರಿಯ ಮಹಿಳೆಯರು ನೊಂದು ಪ್ರತಿಭಟನೆಗೆ ಇಳಿದದ್ದು ಇಂಥದೊಂದು ವಾದ ಬೆಳೆಯಲು ಕಾರಣವಾಯಿತು. ಸ್ತ್ರೀಯಾದವಳು ಒಂದೇ ಸಮಸ್ಯೆಯನ್ನು ಎದುರಿಸುತ್ತಿದ್ದರೂ ಸಹ ಕಪ್ಪು ಸ್ತ್ರೀ ಎದುರಿಸುವ ಸಮಸ್ಯೆ ಬಿಳಿಯ ಸ್ತ್ರೀ ಎದುರಿಸುವ ಸಮಸ್ಯೆಗಿಂತ ಭಿನ್ನವಾಗಿಯೇ ಇದೆ. ಯಾವುದೇ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಅಧೀನ ಸ್ಥಿತಿಯಲ್ಲಿರುತ್ತಾಳೆ. ಕಪ್ಪು ಸ್ತ್ರೀಯರು ಕೇವಲ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸಮಸ್ಯೆಗಳಲ್ಲಿ ಮಾತ್ರವೇ ತೊಳಲಾಡುತ್ತಿರಲಿಲ್ಲ; ಇವುಗಳನ್ನೂ ಒಳಗೊಂಡಂತೆ ವರ್ಣ ತಾರತಮ್ಯ ಮತ್ತು ವರ್ಗತಾರತಮ್ಯದ ಕಪಿಮುಷ್ಟಿಯಲ್ಲಿ ನರಳುತ್ತಿದ್ದರು. ಆದ್ದರಿಂದ ಮಹಿಳಾ ಬಿಡುಗಡೆ ಇನ್ನಷ್ಟು ಜಟಿಲವೆನಿಸಿತು. ಹೀಗಾಗಿ ತಮ್ಮ ಬಿಡುಗಡೆಯ ಹಾದಿಯನ್ನು ಹುಡುಕುತ್ತಾ ಸಾಗಿದ ಮಹಿಳೆಯರು ಸ್ತ್ರೀಯರ ಹಕ್ಕು ಸ್ಥಾಪನೆ, ವರ್ಣತಾರತಮ್ಯ ಮತ್ತು ಗುಲಾಮಗಿರಿಯನ್ನು ನಿರ್ನಾಮ ಮಾಡಲು ಬೀದಿಗಿಳಿದರು. ಬಹುಶಃ ಕಪ್ಪು ಸ್ತ್ರೀವಾದ ಬೆಳೆಯಲು ಇದು ಕಾರಣವಾಯಿತು.

ಕಪ್ಪು ಜನಾಂಗ ಬಿಳಿಯ ಜನಾಂಗದ ಮೇಲೆ ಹೋರಾಡುತ್ತಿದ್ದಾಗ ಕಪ್ಪು ಮಹಿಳೆ ಎದುರಿಸಬೇಕಾಗಿ ಬಂದ ಸಮಸ್ಯೆಗಳು ಎರಡು ಬಗೆಯಾಗಿದ್ದವು. ಒಂದು ತಮ್ಮ ಗಂಡಂದಿರೊಂದಿಗೆ ಕೂಡಿಯೇ ಬಿಳಿಯರ ದೌರ್ಜನ್ಯದ ವಿರುದ್ಧ ಹೋರಾಡುವುದು, ಎರಡು ಪುರುಷ ಪ್ರಧಾನ ವ್ಯವಸ್ಥೆಯಲ್ಲಿರುವ ತಮ್ಮ ಗಂಡಂದಿರೆ ತಮ್ಮ ಮೇಲೆ ನಡೆಸುವ ದೌರ್ಜನ್ಯಗಳ ವಿರುದ್ಧವೂ ಹೋರಾಡುವುದು. ಇಂಥ ಸಂದರ್ಭದಲ್ಲಿ ಕಪ್ಪು ಮಹಿಳೆ ಸಹಜವಾಗಿಯೇ ಗೊಂದಲಕ್ಕೆ ಒಳಗಾಗುತ್ತಾಳೆ. ಅದೆಂದರೆ ಕಪ್ಪು ಜನಾಂಗದ ಅಸ್ತಿತ್ವಕ್ಕಾಗಿ ಹೋರಾಡುವುದು ಮುಖ್ಯವೋ ಅಥವಾ ತನ್ನ ಜನಾಂಗದಲ್ಲಿಯೇ ಇರುವ ಪಿತೃಪ್ರಧಾನತೆಯ ವಿರುದ್ಧ ಹೋರಾಡುವುದು ಮುಖ್ಯವೋ ಎಂಬುದಾಗಿತ್ತು. ಹೀಗಾಗಿ ಕಪ್ಪು ಮಹಿಳೆಯರ ಜವಾಬ್ದಾರಿಗಳು ಹೆಚ್ಚಾದವು.

ಸ್ತ್ರೀ ಸ್ವಾತಂತ್ರ್ಯ ಚಳವಳಿಯಲ್ಲಿ ನೇರವಾಗಿ ಪಾಲ್ಗೊಂಡವರು ಸ್ತ್ರೀಪರ ಧೋರಣೆಯಿಂದ ಗಾಢವಾದ ಸಂಬಂಧವಿಟ್ಟುಕೊಂಡವರು. ಸ್ತ್ರೀನಿಷ್ಠ ಸಾಹಿತ್ಯ ರಚನೆಕಾರರು, ಸ್ತ್ರೀಪ್ರತೀಕಗಳ ವಿಮರ್ಶಕರು, ಸ್ತ್ರೀವಾದಿ ಚಿಂತಕರು ಒಟ್ಟಾಗಿಯೇ ಹೋರಾಟ ನಡೆಸಿದ್ದರಿಂದ ಹುಟ್ಟಿದ ಅಮೇರಿಕ ಸ್ತ್ರೀವಾದಿ ವಿಮರ್ಶೆ ಸ್ತ್ರೀ – ಪುರುಷ ಸಮಾನತೆಯ ಪರಿಕಲ್ಪನೆಯನ್ನು ಹಲವು ನೆಲೆಯಲ್ಲಿ ಚಿಂತಿಸಿದೆ.

ಒಟ್ಟಾರೆ ಅಮೆರಿಕದ ಸ್ತ್ರೀವಾದ ಸ್ತ್ರೀಯರ ವಿಕಾಸದ ಹಾದಿಗಳನ್ನು ಲೈಂಗಿಕ ದಾಸ್ಯದ ಬಿಡುಗಡೆಯನ್ನು ಸಾಹಿತ್ಯದ ಮೂಲಕ ತೋರಿಸಿಕೊಟ್ಟು, ಸ್ತ್ರೀಯರ ಪ್ರಗತಿ ಮತ್ತು ಸುಧಾರಣೆಗೆ ಅವಕಾಶಮಾಡಿತು. ಮಹಿಳೆಯರ ಬರಹಗಳು ಪುರುಷರಿಗಿಂತ ಹೇಗೆ ಭಿನ್ನ ಎಂಬುದನ್ನು ಪ್ರಕಟಿಸಿತು. ನಿರ್ಲಕ್ಷ್ಯಕ್ಕೊಳಗಾಗಿದ್ದ ಸೃಜನಶೀಲ ಲೇಖಕಿಯರನ್ನು, ಕಲಾವಿದೆಯರನ್ನು ಮುಖ್ಯಧಾರೆಗೆ ಬರುವಂತೆ ಪ್ರೇರಣೆ ನೀಡಿತು. ಸಂಪ್ರದಾಯವನ್ನು ಪ್ರಶ್ನಿಸುವ ದೃಷ್ಟಿಧೋರಣೆಗಳನ್ನು ಹುಟ್ಟುಹಾಕಿತು. ಮಹಿಳಾ ಸಂಸ್ಕೃತಿಯೊಂದು ಮೈಚೆಲ್ಲಿಕೊಂಡು ಸಾಮಾಜಿಕ ಮತ್ತು ಸಾಂಸ್ಕೃತಿಕ ಹಾಗೂ ಧಾರ್ಮಿಕ ಚಳವಳಿಯಾಗಿ ರೂಪುಗೊಳ್ಳಲು ಅಮೆರಿಕದ ಸ್ತ್ರೀವಾದ ಕಾರಣವಾಯಿತು. ಮಹಿಳೆಯರು ಪಿತೃಪ್ರಧಾನ ಸಂಸ್ಕೃತಿಯಲ್ಲಿ ಸ್ವಂತಿಕೆಯನ್ನು ಕಳೆದುಕೊಳ್ಳುತ್ತಿರುವುದನ್ನು ಪುರುಷ ಬರಹದ ಮಿತಿಗಳನ್ನು, ಅಸ್ಪಷ್ಟತೆಗಳನ್ನು ಅವುಗಳ ಆಳದಲ್ಲಿನ ಸಾಂಸ್ಕೃತಿಕ ಬಿಕ್ಕಟ್ಟುಗಳನ್ನು ತೋರಿಸಿಕೊಟ್ಟಿದ್ದು ಅಮೆರಿಕದ ಸ್ತ್ರೀವಾದ. ತಮ್ಮ ಸೃಜನಶೀಲತೆಯ ಮೂಲಕ ಸೈದ್ಧಾಂತಿಕವಾಗಿ ಮಹಿಳಾ ಚಳವಳಿಯನ್ನು ಮುನ್ನಡೆಸಿದ ಕೀರ್ತಿ ಈ ಸ್ತ್ರೀವಾದಿಗಳದು.

ಫ್ರೆಂಚ್ ಸ್ತ್ರೀವಾದವೂ ಹೆಚ್ಚಾಗಿ ಅವಲಂಬಿತವಾಗಿರುವುದು ಮನಃಶಾಸ್ತ್ರದ ಮೇಲೆ ಮನೋವಿಶ್ಲೇಷಣೆಯ ಮೂಲಕ ಲಿಂಗ ಅಸಮಾನತೆಯನ್ನು ತೋರಿಸಿಕೊಡುವ ಯತ್ನವನ್ನು ಮಾಡುತ್ತದೆ. ಆದ್ದರಿಂದಲೇ ಪಶ್ಚಿಮದ ಇತರೆ ಸ್ತ್ರೀವಾದಗಳಿಗಿಂತ ಹೆಚ್ಚು ಕ್ಲಿಷ್ಟವೂ, ಅಸ್ಪಷ್ಟವೂ ಆದ ಸ್ತ್ರೀವಾದ ಇದೆನಿಸಿತು. ಇದರಿಂದ ಅನುಭವಿಸುವುದಕ್ಕಿಂತ ಮನೋಮಟ್ಟದ ಲಿಂಗ ಅಸಮಾನತೆಯ ವಿಕಾರಗಳನ್ನು ಗ್ರಹಿಸುವ ಯತ್ನ ನಡೆಯಿತು. ಮಹಿಳಾ ಬರಹಗಾರರಾಗುವುದೇ ದೊಡ್ಡ ಸಾಧನೆ ಎಂಬಂತೆ ಮಹಿಳೆಯರು ಬೀರುತ್ತಿದ್ದ ಹೊತ್ತಿನಲ್ಲೇ ಮಹಿಳೆಯರಲ್ಲಿ ಸ್ತ್ರೀಯಾತ್ಮಕ ಬರಹಗಾರರನ್ನು ಹುಡುಕಿದ್ದು ಅಂತವರ ಬರಹಗಳಲ್ಲಿನ ಸ್ತ್ರೀಪರ ನಿಲುವನ್ನು ಪ್ರತಿನಿಧಿಸಿದ್ದು ಫ್ರೆಂಚ್ ಸ್ತ್ರೀವಾದ ಬಹುದೊಡ್ಡ ಸಾಧನೆ.

ಆಧುನಿಕ ಸ್ತ್ರೀವಾದಕ್ಕೆ ಆದರ್ಶವನ್ನು ನಿರ್ದಿಷ್ಟ ಧ್ಯೇಯೋದ್ದೇಶಗಳನ್ನು ಗೊತ್ತುಪಡಿಸಿದ್ದು ಫ್ರೆಂಚ್ ಸ್ತ್ರೀವಾದ ಜೀವಶಾಸ್ತ್ರೀಯ ನೆಲೆಯಿಂದ ಮಹಿಳೆಯ ಸ್ವರೂಪವನ್ನು ಆರಂಭಿಸಿ ಭಾಷಿಕ ಸಾಂಕೇತಿಕತೆಯನ್ನು ಪುನರ್‌ರೂಪಿಸುವ ಮಟ್ಟಕ್ಕೆ ಸ್ತ್ರೀವಾದವನ್ನು ಬೆಳೆಸಿದ್ದು, ಹೆಣ್ಣಿನ ಮೃದು, ಮಧುರ, ಕೋಮಲ ಸ್ವಭಾವಗಳ ಚಿತ್ರಣವೇ ಮುಖ್ಯವೆನಿಸಿದ್ದವರಿಗೆ ಪುರುಷಮುಖಿ ಚಲನೆಯಲ್ಲಿ ಹೆಣ್ಣು ಸಾಗುತ್ತಿರುವ ಬಗೆಯನ್ನು ಪರಿಚಯಿಸಿಕೊಟ್ಟ, ಸಾಗಬೇಕಾದ ಹಾದಿಯನ್ನು ತೋರಿಸಿಕೊಟ್ಟು ಸ್ತ್ರೀಪ್ರಜ್ಞೆಯ ನೆಲೆಯಿಂದ ಸಾಂಸ್ಕೃತಿಕ ಹೋರಾಟ ಕಟ್ಟಿದ ಕೀರ್ತಿ ಫ್ರೆಂಚ್ ಸ್ತ್ರೀವಾದಕ್ಕೆ ಸಲ್ಲುತ್ತದೆ.

ನಮ್ಮ ಪರಂಪರೆಯಲ್ಲಿಯೂ ಗಾರ್ಗಿ, ಮೈತ್ರೇಯಿಯರಿಂದ ಹಿಡಿದು ಗಾಯತ್ರಿ ಸ್ಪಿವಾಕ್, ಸೂಸಿಥಾರು, ಮಹಾಶ್ವೇತದೇವಿ ಮುಂತಾದ ಆಧುನಿಕ ಸ್ತ್ರೀವಾದಿಗಳವರೆಗೆ ಚರ್ಚೆಯನ್ನು ಬೆಳೆಸಲು ಸಾಧ್ಯವಿದೆ. ಅದು ನಿಜವೂ ಕೂಡ. ಆದರೆ ಇವತ್ತಿನ ಮಹಿಳೆ ತನ್ನ ಸಮಸ್ಯೆಗಳಿಗೆ ಕಾರಣಗಳನ್ನು ಹುಡುಕುತ್ತಿರುವ ಸಾಂಸ್ಕೃತಿಕ ಸಂಗತಿಗಳಿಗೆ ಪಶ್ಚಿಮದ ಸ್ತ್ರೀವಾದವೇ ಮೂಲಪ್ರೇರಣೆ ಮತ್ತು ಪೋಷಣೆ. ಅಂದಮಾತ್ರಕ್ಕೆ ಪಶ್ಚಿಮದ ಸ್ತ್ರೀವಾದ ಅತ್ಯಂತ ಮಹತ್ವದ್ದು ಎಂದು ಒಪ್ಪಿ ನಡೆಯಬೇಕಿಲ್ಲ. ಅದು ಆಯಾಯ ಕಾಲಮಾನದ ಒತ್ತಡದಲ್ಲಿ ಹುಟ್ಟಿ ಬಂದಿರುವಂತಹದ್ದು. ಆದ್ದರಿಂದ ಅದನ್ನೆ ನಂಬಿ ಕೂರಬೇಕಾದ್ದಿಲ್ಲ. ಅದರೆ ಪಶ್ಚಿಮದ ಪ್ರೇರಣೆಯಿಂದ ಭಾರತೀಯ ವಾದವನ್ನು ಹುಡುಕಿಕೊಳ್ಳಬೇಕಾದ್ದು ಅರ್ಥಪೂರ್ಣ ಕೆಲಸ. ಪಶ್ಚಿಮದ್ದೆಂದರೆ ಪ್ರಶ್ನೆ ಮಾಡದೆ ಒಪ್ಪಿ ನಡೆಯುವ ನಾವು ಭಾರತೀಯವಾದದ ಬಗ್ಗೆ ಅಲಕ್ಷ್ಯದಿಂದಿರುತ್ತೇವೆ. ಶತ-ಶತಮಾನಗಳ ಕಾಲ ದಾಸ್ಯರಲ್ಲಿದ್ದ ದೇಶಗಳ ಪಾಡು ಇದು. ಆದ್ದರಿಂದಲೇ ಹೇಳಿದ್ದು ಪ್ರೇರಣೆ – ಪ್ರಭಾವಗಳು ಎಲ್ಲಿಂದಲೇ ಬರಲಿ ನಮ್ಮದನ್ನು ನಾವು ಶೋಧಿಸಿಕೊಳ್ಳದಿದ್ದರೆ ನಾವು ನಾವಾಗಲಾರೆವು.[೧]

ಭಾರತೀಯ ಸ್ತ್ರೀವಾದವೆಂದರೆ ಸವಾಲುಗಳು, ಪ್ರತಿಭಟನೆಗಳನ್ನು ತನ್ನ ಎರಡು ಬಾಹ್ಯಗಳಲ್ಲಿ ತಬ್ಬಿಕೊಂಡು ಸಾಗುವುದೇ ಆಗಿದೆ. ಮಹಿಳಾ ಅಧ್ಯಯನ ಮಾತ್ರ ಮಹಿಳೆಯರನ್ನು ಉಳಿಸಲಾರದು, ಬೆಳೆಸಲಾರದು. ಅಂದ ಮಾತ್ರಕ್ಕೆ ಅದನ್ನು ಕೈ ಬಿಡುವಂತೆಯೂ ಇಲ್ಲ. ಜಗತ್ತಿನ ಮಹಿಳೆಯರ ಬಗ್ಗೆ ಉನ್ನತ ವಿಚಾರಗಳು ನಮಗೆ ತಿಳಿಯಬೇಕಾದ್ದು ಭಾರತೀಯ ಮಹಿಳೆಯರ ಬಗ್ಗೆ ತಿಳಿದುಕೊಳ್ಳಬೇಕಾದಷ್ಟೆ

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೨೨೩-೨೨೮, ಕರ್ತೃ: ಡಾ. ಹಾಲತಿ ಸೋಮಶೇಖರ್.

ಮುಖ್ಯವಾದದ್ದು. ಜತೆಗೆ ನಮ್ಮ ಸಂದರ್ಭದ ವಾಸ್ತವಗಳನ್ನು ವಿಶ್ಲೇಷಿಸುವ, ವಿಮರ್ಶಿಸುವ ಯತ್ನದಲ್ಲಿ ಎಲ್ಲರೂ ಒಂದಾಗಿ ಕೂಡಿ ಶ್ರಮಿಸಬೇಕು. ಅತ್ಯಂತ ಶೋಚನೀಯ ಸ್ಥಿತಿಯಲ್ಲಿರುವ ಮಹಿಳೆಯರ ಬಗ್ಗೆ ಅರಿಯುವುದೆಂದರೆ ಶುದ್ಧ ಮಾನವತೆಯ ಅಧ್ಯಯನವಾಗುತ್ತದೆ. ಭಾರತೀಯ ಸ್ತ್ರೀವಾದ ಈ ದಿಶೆಯಲ್ಲಿ ಶ್ರಮಿಸಬೇಕಾಗಿದೆ. ಅದಾಗದಿದ್ದರೆ "ಹುಟ್ಟಿದ ಪ್ರತಿಯೊಬ್ಬ ಶ್ರೇಷ್ಠ ಮಹಿಳಾ ಪ್ರತಿಭೆಯು ಮಾನವಕುಲಕ್ಕೆ ದಕ್ಕದೆ ಹೋಗುತ್ತದೆ".

**೩.೨. ಜನಪದ ಸಾಂಸ್ಕೃತಿಕತೆಯಲ್ಲಿ ಮಹಿಳೆ ಮತ್ತು ಸಮಾನತೆ**

ಜಗತ್ತಿನ ಸಾಂಸ್ಕೃತಿಕ ಹಂತಗಳನ್ನು ಗಮನಿಸಿದಾಗ ನಿಚ್ಚಳವಾಗಿ ಎರಡು ರೀತಿಯ ಅಸ್ಪೃಶ್ಯವಲಯಗಳು ಕಂಡುಬರುತ್ತವೆ. ಒಂದು ಬಣ್ಣದ್ದು ಮತ್ತೊಂದು ಲಿಂಗದ್ದು. ಕಪ್ಪು ಬಿಳುಪಿನ ಲೋಕದಲ್ಲಿ ಮಹಿಳೆ ಬೆಳ್ಳಗಿದ್ದರೂ ಕಪ್ಪಾಗಿಬಿಟ್ಟಿದ್ದಾಳೆ. ಕಪ್ಪಾಗಿದ್ದವಳಂತೂ ಕಣ್ಣಿಗೆ ಕಾಣದಂತೆ ಅದೃಶ್ಯವಾಗಿಬಿಟ್ಟಿದ್ದಾಳೆ. ಇಂಗ್ಲೆಂಡ್ ರಾಣಿಯ ಸೊಸೆ ಲೈಂಗಿಕ ಸ್ವಾತಂತ್ರ್ಯವನ್ನು ಆರಿಸಿಕೊಂಡಿದ್ದು ಮಹಾ ತಪ್ಪಾಗಿಬಿಡುತ್ತದೆ. ರಾಜಕುಮಾರನದು ಒಪ್ಪಿತವಾಗಿಬಿಡುತ್ತದೆ. ಇಲ್ಲಿ ನಾವು ಸಾಂಸ್ಕೃತಿಕ ಕಾರಣಗಳನ್ನು ಹುಡುಕಿದಾಗ ಅಂತರದ ಅರಿವಾಗುತ್ತದೆ. ಕೃಷಿಯ ಹಂತಕ್ಕೆ ಕಾಲಿಟ್ಟ ಮಾನವ ತಳಿಯಲ್ಲಿ ಮಹಿಳೆ ಹೆತ್ತು ಒಳ ಸೇರಿದಾಗ, ಗಂಡಾದವನು ಪಶುಸಂಪತ್ತು ಆರ್ಥಿಕ ಸಂಪತ್ತನ್ನು ಬಲಪಡಿಸಿಕೊಳ್ಳುತ್ತಾ ಹೋಗುತ್ತಾನೆ. ಗಣ ಸಮೂಹದ ನಾಯಕನಾಗುತ್ತ ತನ್ನ ಪಿತೃ ಶಕ್ತಿಯನ್ನು ಬಲಪಡಿಸಿಕೊಳ್ಳಲಾರಂಭಿಸುತ್ತಾನೆ. ಇದು ಮಾತೃ ಸಂಸ್ಕೃತಿಯನ್ನು ಪಿತೃ ಸಂಸ್ಕೃತಿಯು ಆವರಿಸಿಕೊಂಡ ಒಂದು ಕ್ರಿಯಾ ವಿಧಾನ.

ಶ್ರೇಣೀಕೃತ ಸಾಮಾಜಿಕ ಸಂರಚನೆಯ ಹಾದಿಯಲ್ಲಿ ವರ್ಗ, ಜಾತಿ ವರ್ಣಗಳು ಭಾರತೀಯ ನೆಲೆಯಲ್ಲಂತೂ ಮಹಿಳೆಯನ್ನು ಒಂದು ವಸ್ತುವಾಗಿ ನೋಡಿದೆ. ವಿಜೃಂಭಿಸಿದೆ, ಹೊಗಳಿ ಅಟ್ಟಕ್ಕೇರಿಸಿದೆ. ಗೌರವಿಸುವ ನೆಪದಲ್ಲಿ ಸ್ವಾತಂತ್ರ್ಯಹರಣ ಗೈದಿದೆ. ಮಹಿಳೆ ಸಹನಾಮಹಿಯಾಗಲು ಅವಳ ಮೇಲೆ ಬಿದ್ದ ಒತ್ತಡಗಳು ಕಾರಣವಾಗುತ್ತವೆಯೇ ವಿನಃ ಸಮಾನತೆಯ ಅಂಶಗಳಲ್ಲ. ಪ್ರಜಾಪ್ರಭುತ್ವದ ಮಂತ್ರದಡಿಯಲ್ಲಿ ಸಹ ಮಹಿಳೆ ಇನ್ನೂ ಸಮಾನತೆಗಾಗಿ ಹಾತೊರೆಯುತ್ತಲೇ ಇದ್ದಾಳೆ. ಭಾರತೀಯ ಸಮಾಜವು ಇಂದು ರಾಜಕೀಯವಾಗಿ ಮಹಿಳೆಯನ್ನು ಗಂಡಿಗೆದುರಾಗಿ ತಂದು ನಿಲ್ಲಿಸುತ್ತಲಿದೆ. ಇದು ಅಭಿವೃದ್ಧಿ ಸಂಕೇತವೇನೋ ಹೌದು. ಆದರೂ ಇದು

ಸಂಪೂರ್ಣ ದಕ್ಕಿದೆಯೆಂದಲ್ಲ. ಏಂಗಲ್ಸ್ ಹೇಳುವಂತೆ 'ಉತ್ಪಾದನೆಯ ಕ್ಷೇತ್ರದಲ್ಲಿ ಮಹಿಳೆಯು ಪುರುಷನಿಗೆ ಸಮಾನವಾಗಿ ತನ್ನನ್ನು ತೊಡಗಿಸಿಕೊಂಡಾಗಲೇ ಅವಳಿಗೆ ದಾಸ್ಯದಿಂದ ಬಿಡುಗಡೆ' ಎಂಬ ಮಾತಿನಲ್ಲಿ ಅವಳ ಅಭಿವೃದ್ಧಿ ಸಮಾನತೆಯಡಗಿದೆ. ಮಹಿಳೆ ತನ್ನ ಮಿತಿಗಳನ್ನು ದಾಟದಿರಲು ಬಾರತೀಯ 'ಮಿಥು'ಗಳಿಗೊಳಗಾಗಿದ್ದಾಳೆ. ಅವಳು ಪುರುಷನ ಕನಸುಗಳಿಗೆ ಸ್ಪಂದಿಸುತ್ತಾಳೆ. ಇದು ಮಹಿಳೆ ಪುರುಷನ ಒಡೆತನಕ್ಕೊಳಗಾದ ಹಂಗಿನದು. ಇದಕ್ಕೆ ಅನೇಕ ಐತಿಹಾಸಿಕ ಸಾಂಸ್ಕೃತಿಕ ಅಧೀನತೆಗಳಿವೆ. ಇದರಲ್ಲಿ ವಂಶಾಭಿವೃದ್ಧಿ ನೀಡದ ಮಹಿಳೆಯನ್ನು ಅನೇಕ ವೃತ ನಿಯಮಗಳಿಗೊಡ್ಡಿದಾಗ ಅನೇಕ ನಂಬಿಕೆಗಳೇ ಉದ್ಭವಗೊಂಡ ದಾಖಲೆಗಳಿವೆ. ಶಂತನು ಮಹಾರಾಜ ಗಂಗೆಯ ದಾರ್ಷ್ಟ್ಯತೆಯಿಂದ ಧೃತಿಗೆಟ್ಟಾಗ, ಸತ್ಯವತಿಯು ಭೀಷ್ಮನ ಬದುಕನ್ನೇ ಕಿತ್ತುಕೊಂಡಾಗ, ಮೇನಕೆ, ಊರ್ವಶಿ, ರಂಭೆಯರು ಬೇಕೆನಿಸಿದ ಗಂಡನ್ನು ಕೂಡಿದಾಗ, ಚಿತ್ರಾಂಗದೆ, ಉಲೂಚಿಯರು ಅರ್ಜುನನನ್ನು ಕೂಡಿ ಹಡೆದಾಗ ಅಂದಿನ ಸಮಾಜವು ಮಹಿಳೆಯನ್ನು ಸಮಾನವಾಗಿ ಪರಿಗ್ರಹಿಸಿದ ದಾಖಲೆಗಳಿವೆ.

ಜನಪದ ಸಂಸ್ಕೃತಿಯಲ್ಲಿ ಮಹಿಳೆಯ ಶೃಂಗಾರವನ್ನು, ದಾಂಪತ್ಯದ ಪರಿಯನ್ನು ದೈವೀ ಗುಣವನ್ನು ಹಾಡಿಹೊಗಳಿದ್ದಾರೆಂದು ಹೇಳುವ ವಿಮರ್ಶಕರು ಅಂತರಾಳದ ದನಿಯನ್ನು ಆಲಿಸದೆ ಇರುವುದು ಒಂದು ವಿಪರ್ಯಾಸ. ಮಾರಮ್ಮನ ಕಥೆಯಲ್ಲಿ ಬ್ರಾಹ್ಮಣ ಮಹಿಳೆ ಮಾದಿಗನನ್ನು ಅರಿಯದೆ ಕೂಡಿ, ಅದು ಗೊತ್ತಾದಾಗ ಅಟ್ಟಿಸಿಕೊಂಡು ಹೋಗಿ ಕೊಂದ ಕಥೆಬರುತ್ತದೆ. ಮಾದಿಗ ಕೋಣನ ಬಲಿಯ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಇದು ಅನುಲೋಮ ವಿಲೋಮ ಪರಿಧಿಯನ್ನು ಸುತ್ತಿಬಳಸಿ ಭಯ ಮೂಲದಲ್ಲಿ ಹೇಳುವಂತಹದು. ಗಂಡು ಕೆಳಹಂತದ ಮಹಿಳೆಯನ್ನು ಒಂದು ವಸ್ತುವಿನಂತೆ ಆಯ್ದುಕೊಂಡಿದ್ದಾನೆ. ಪಾತಿವ್ರತ್ಯದ ಪಟ್ಟಿಕಟ್ಟಿ ಮಹಿಳೆಗೆ ವೈಭವೀಕರಣ ನೀಡಿದ್ದಾನೆ. ಪುರಾಣ ಮೂಲದಲ್ಲಿ ಇದನ್ನು ಮುರಿದವಳು ಕೈಕೆ. ಪಟ್ಟದ ರಾಣಿಯರಿದ್ದರೂ ಹೋದ ಕಡೆಯಲ್ಲೆಲ್ಲಾ ಆಳುವ ಗಂಡೆಂಬ ಗರ್ವದಿಂದ ಮಹಿಳೆಯರನ್ನು ಆಯ್ದು ಅಂತಃಪುರ ಸೇರಿಸಿಕೊಳ್ಳುತ್ತಿದ್ದ ಪುರುಷರಿಗೆ ಕೊಟ್ಟ ಇದಿರೇಟು ಕೈಕೆಯದು.

ಜನಪದ ಸಾಹಿತ್ಯ ಸಾಂಸ್ಕೃತಿಕತೆಯಲ್ಲಿ ಚಾಮುಂಡಿಯ ಕಥೆ ಬಹು ಸ್ವಾರಸ್ಯವಾಗಿ ಗಂಡನ್ನು ಬರಮಾಡಿಕೊಳ್ಳುತ್ತದೆ. ಮೂಲದ 'ಶಕ್ತಿ ಸಮಾಜ'ದಲ್ಲಿ ಮಹಿಳೆ

ಸ್ವಚ್ಛಂದವಾಗಿದ್ದಳು. ರೇಣುಕೆಯ ಸ್ವಾತಂತ್ರ್ಯ ಹರಣ ಮಾಡಿದವನು ಪರಶುರಾಮ. ಅವಳು ತಾಯಿಯಾದರೂ ತಂದೆಯ ಮಾತಿನಂತೆ ಕಡಿದುಹಾಕುತ್ತಾಳೆ. ಜನಪದ ಸಾಹಿತ್ಯದ ಎಲ್ಲಮ್ಮ ತನ್ನ ಆದಿ ಕಥೆ ಹೇಳುತ್ತಲೇ ತನ್ನ ಹೆಣ್ಣು ಸಂತತಿಯನ್ನು ಬೆಳೆಸುವುದಿಲ್ಲ. ಶಿವೆಯ ಸಂಕೇತವಾದ ಅವಳು ಶಿವನ ಸೂಳೆಯಾಗಿದ್ದುಕೊಂಡು ಅದ್ವಯಗೊಳಿಸಿಕೊಳ್ಳುತ್ತಾಳೆ. ಸ್ವಚ್ಛಂದವಾಗಿದ್ದು ಗಂಡುಗಳಂತೆಯೇ ಸಮಾನತೆಯನ್ನು ತನ್ನ ಲೈಂಗಿಕ ಜೀವನದಲ್ಲಿ ಅಂತರ್ಗತಗೊಳಿಸಿಕೊಂಡಿದ್ದ ಮಹಿಳೆಯನ್ನು ಸೂಳೆ ಎಂದು ಕರೆದಿರುವುದು ಗಂಡು ಸಮಾಜ. ಸೂಳೆಯನ್ನು ಪೂಜಿಸುತ್ತಲೇ ಸೂಳೆಗಾರಿಕೆಯು ಗಂಡುಗಳ ಹಕ್ಕೆಂದು ತಿಳಿದ ಪಿತೃ ಸಮಾಜವು ವಿವಾಹವಿಲ್ಲದೆ ಹೆರಬಹುದಾದ ಕುಂತಿಯನ್ನು ನೋಯಿಸದಂತೆ, ಕರ್ಣನನ್ನು ಅನಾಥನನ್ನಾಗಿ ಮಾಡುವಂತೆ ನೋಡಿಕೊಂಡಿದೆ. ಇನ್ನೇನು ವಂಶ ನಿಂತುಹೋಗುತ್ತದೆನ್ನುವಾಗ ಕುರುವಂಶದ ವಿಧವೆಯನ್ನು ನಿಯೋಗದಿಂದ ಹೆರುವ ಯಂತ್ರವಾಗಿ ಅಂದಿನ ಸಮಾಜವು ಪರಿವರ್ತಿಸಿದೆ.[೧]

ಜನಪದ ಸಾಹಿತ್ಯ ಸಾಂಸ್ಕೃತಿಕತೆಯಲ್ಲಿ ಗಂಡಿನ ಸೂಳೆಗಾರಿಕೆ ಸಹಿಸಿರುವ ದಾಖಲೆಗಳುಂಟು. ಅಂತೆಯೇ ಸಮಾನತೆಗಾಗಿ ಸಿಡಿದೆದ್ದ ಸೂಚನೆಗಳೂ ಉಂಟು. 'ನಕ್ಕರೆ ನಗಲವ್ವ ನಾ ಮುಡಿದ ಕೇದಿಗಿ, ಅವಳೊಂದು ಗಳಿಗೆ ಮುಡಿಯಲಿ' ಹೀಗೆಂದು ಸರಳತೆಯಲ್ಲಿ ಬದುಕುವ ಮಹಿಳೆ ಅನೇಕ ಹಂತಗಳನ್ನೇ ದಾಟಿ ಬಂದಿದ್ದಾಳೆ. ಅವಳಿಗೆ ಸೂಳೆಗಾರಿಕೆ ಮಾಡುವ ಗಂಡನ ಬಗ್ಗೆ ಅನುಕಂಪವಿದೆಯೇ ಹೊರತು ಉಲ್ಲಾಸವಿಲ್ಲ. ಹೇಸಿಗೆಯಲ್ಲಿ ಚಿನ್ನ ಬಿದ್ದಿದ್ದರೆ ಎತ್ತಿಕೊಳ್ಳುವಂತೆ ಸ್ತ್ರೀ ರತ್ನವು ಕೀಳುಕುಲದಲ್ಲಿದ್ದರೂ ಪಡೆಯಬೇಕೆಂದು ಹೇಳುವ ಮನುವಂತಹವನ ಸಲಹೆಯು ಸಮಾಜದಲ್ಲಿತ್ತು. ಅದು ಮನುವಿನ ಮೂಲಕ ಸಮಾಜವು ಹೇಳಿಸಿದ ರೀತಿಯಿದು.

ಇದಕ್ಕೆಲ್ಲ ಮುಕ್ತಿ ಬಂದದ್ದು ವಿದ್ಯೆಯ ಮೂಲಕ ಎನ್ನಲು ಅಡ್ಡಿಯಿಲ್ಲ. ವಿದ್ಯೆಯೊಂದೇ ವರ್ಣ ಸಂಕೋಲೆಯನ್ನು, ಸ್ತ್ರೀ ಸಂಕೋಲೆಯನ್ನು ವಿಮುಕ್ತಿಗೊಳಿಸುವ ಮಾರ್ಗ ಅಕ್ಕಮಹಾದೇವಿಯು ವಿದ್ಯಾಕೇಂದ್ರದ ಆವರಣದಲ್ಲಿದ್ದುದರಿಂದ ಸೆಟೆದು ನಿಂತಳು. ಬಳ್ಳಿಗಾವೆ ಒಂದು ವಿದ್ಯಾಕೇಂದ್ರ. ಅಲ್ಲಿ ಅಕ್ಕ, ಶಾಂತಲಾ, ಅಲ್ಲಮ ಮುಂತಾದವರು ವಿದ್ಯಾವಂತರಾದ ಬಗೆಯೇ ಅವರನ್ನು ಒಂದೊಂದು ಬಗೆಯಲ್ಲಿ

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೨೬೩-೩೩೫,
ಕರ್ತೃ: ಡಾ. ಹಾಲತಿ ಸೋಮಶೇಖರ್.

ಚಿಂತಕರನ್ನಾಗಿ ಮಾಡಿದೆ. ಆ ಪರಿಸರವು ಸಿದ್ಧರನ್ನು ಅನೇಕ ಅನುಭಾವಿಗಳನ್ನು ಸೆಳೆದುಕೊಂಡಿದ್ದ ಸ್ಥಳ. ಹೀಗೆ ವಿದ್ಯೆಯು ಸಮಾಜವನ್ನು ತಿದ್ದಬಲ್ಲದು. ಕಾಶ್ಮೀರದ ಲಲ್ಲೇಶ್ವರಿಯಂತೆ ಅಕ್ಕನು ಸ್ವಾಭಿಮಾನಕ್ಕೆ ಧಕ್ಕೆಯಾದಾಗ ಬಿಟ್ಟು ನಗ್ನಳಾಗಿ ಹೊರಟವಳು. ಅವ್ವೈಯರ್ ಮದುವೆಯನ್ನು ನಿರಾಕರಿಸಿದವಳು. ಅಂಡಾಳ ಅಸ್ಪೃಶ್ಯ ತಾಯಿಯ ಮಗಳಾಗಿದ್ದು ಹೊರ ಜಗತ್ತಿಗೆ ಬಂದಳು. ಮೀರಾಬಾಯಿ ರಾಜವಂಶವನ್ನು ಧಿಕ್ಕರಿಸಿ ಅಕ್ಕನಂತೆ ಹೊರಬಂದವಳು. ಇಷ್ಟೆಲ್ಲಾ ದಾರ್ಷ್ಟ್ಯತೆ ಜನಪದ ಸಮಾಜದಲ್ಲಿತ್ತೆ ಎನ್ನಲು ಕೆಲವು ಆಕರಗಳಿಲ್ಲದೆ ಇಲ್ಲ ಜುಂಜಪ್ಪನ ಕಥೆಯ ಚನ್ನಮ್ಮ ಈಶ್ವರನನ್ನು ಬೇಡಿ ಬಂಜೆತನ ನೀಗಿಸಿಕೊಳ್ಳುತ್ತಾಳೆ. ಹೀಗೆ ಹೆಣ್ಣಿನ ಪಾತಿವ್ರತ್ಯಕ್ಕೆ ಬರುವ ದಿವ್ಯಗಳು, ಸಂಕಷ್ಟಗಳು, ವ್ರತಗಳು, ಪವಾಡಗಳು ಜನಪದ ಸಮಾಜದಲ್ಲಿದೆ.

ಸಮಾಜವು ಕೌಟುಂಬಿಕ ಬೆಳವಣಿಗೆಯ ಹಂತದಲ್ಲಿ ಹೆಣ್ಣಿಗೊಂದು ಗಂಡಿಗೊಂದು ಭೇದ ಮಾಡಿದೆ. ಹೆಣ್ಣಾದವಳು ತಿರುಗಿ ಬೀಳುತ್ತಲೇ ಸ್ವಚ್ಛಂದ ಲೈಂಗಿಕ ಜೀವನದ ಮಾದರಿಯನ್ನು ಅನುಸರಿಸಬೇಕೆಂದು ಹೇಳುವ ಬಗೆಯಿದಲ್ಲ. ಅಕ್ಕನಾಗಲೀ, ಸಿರಿಯಾಗಲೀ, ಸಂಕಮ್ಮನಾಗಲೀ ಗಂಡುಗಳನ್ನು ತಿರಸ್ಕರಿಸಿ ಸ್ವಾಭಿಮಾನಕ್ಕೆದುರಾಗಿ ಸೂಳೆಯರಾಗಿ ಬದುಕಿದವರಲ್ಲ. ಸ್ವಾಭಿಮಾನದ ಇದಿರೇಟು ಕೌಟುಂಬಿಕ ನೆಲೆಯಲ್ಲಿ ಸಮಾನತೆಯನ್ನು ಬಯಸುವುದಾಗಬೇಕು. ಸಮಾನತೆಯನ್ನು ಬಯಸುತ್ತಲೇ ಪರಸ್ಪರ ಅರಿವುಳ್ಳವರಾಗಬೇಕು. ಇದೇ ಕಥೆ ರಾವಣನಿಂದ ಸೀತಮ್ಮನನ್ನು ಬಿಡಿಸಿಕೊಂಡು ಶ್ರೀರಾಮನು ಹೇಳಲು ಹೊರಟ ಕಥೆ. ಈ ಕಥೆ ಹೇಳುತ್ತಲೇ ಶ್ರೀರಾಮನು ಹೆಣ್ಣನ್ನು ಶಂಕಿಸಿದ್ದಾನೆ. ಶಂಕಿಸುತ್ತಲೇ ದುಃಖ ಸಾಗರದಲ್ಲಿ ಲೀನವಾಗಿದ್ದಾನೆ. ಈ ಶಂಕೆಯು ಸಮಾಜದಲ್ಲಿ ಹೆಣ್ಣನ್ನು ಮಾತ್ರ ಸೂಳೆ, ಬೋಳಿಯರನ್ನಾಗಿಸಿದೆ. ಪ್ರತಿಯೊಂದು ಬೈಗಳೂ ಸಹ ಹೆಣ್ಣನ್ನೇ ಕುರಿತಂತಿರುವುದನ್ನು ಗಮನಿಸಬೇಕಾಗುತ್ತದೆ. ಕೋಣೆಕೊಟ್ಟಿಗೆ ದಾಟಿ ಬೀದಿಗೆ ಬಂದಿರುವ ಈಗಿನ ಮಹಿಳೆ, ಗಂಡನ್ನು ಕೋಣೆ ಕೊಟ್ಟಿಗೆಗೆ ಎಳೆದುಕೊಳ್ಳುತ್ತಲೇ ಅಧಿಕಾರದ ಗದ್ದುಗೆಯಲ್ಲಿ ಸಮಾನತೆಯನ್ನು ಪಡೆದುಕೊಳ್ಳಬೇಕು. ಆಗ ಕೋಣೆಕೊಟ್ಟಿಗೆಗಳೂ ಉಳಿಯುತ್ತವೆ. ಗದ್ದುಗೆಗಳೂ ಲಿಂಗ-ಅಸೂಯೆಗಳಿಂದ ಪಾರಾಗುತ್ತವೆ.

### ೩.೩. ಸಾಂಸ್ಕೃತಿಕ ಪುನರುಜ್ಜೀವನ ಕಾಲದಲ್ಲಿ ಮಹಿಳೆ

ದೇಶದ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಮಹಿಳೆಯರ ಪ್ರತಿಭೆಯನ್ನು ಉಪಯೋಗಿಸಿಕೊಳ್ಳುವುದು ಆಧುನಿಕ ಅಭಿವೃದ್ಧಿಯ ಸಿದ್ಧಾಂತ. ಹೀಗಾಗಿ ಮಹಿಳೆ

ಮತ್ತು ಪುರುಷ ಪಾತ್ರಗಳ ನಡುವಿನ ಪರಸ್ಪರ ಸಂಬಂಧಗಳನ್ನು ಲಿಂಗಸಂಬಂಧಿ ವಿಚಾರಗಳೊಂದಿಗೆ ವಿಶ್ಲೇಷಿಸುವ ಚಿಂತನೆ ಪ್ರಾರಂಭವಾಯಿತು. ಸ್ತ್ರೀ-ಪುರುಷರ ಸಾಂಸ್ಕೃತಿಕ ಸಂಬಂಧಗಳು ಮತ್ತು ಅವರು ನಿರ್ವಹಿಸುವ ಕೆಲಸಕಾರ್ಯಗಳು ಬಹುಮಟ್ಟಿಗೆ ರೂಢಿಗತವಾಗಿ ಬಂದಿವೆಯೇ ವಿನಾ ದೈಹಿಕ ಸಬಲತೆ ಅಥವಾ ದುರ್ಬಲತೆಯಿಂದಲ್ಲ. ಮಹಿಳೆ ಮತ್ತು ಪುರುಷನ ಬಗ್ಗೆ ಈವರೆಗಿನ ವ್ಯಾಖ್ಯಾನಗಳು ಬದಲಾಗಬೇಕಾದ ಅಗತ್ಯವಿದೆ. ಜೈವಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಮಹಿಳೆಯನ್ನು ಬೇರೆಯಾದ ಆಯಾಮಗಳಲ್ಲಿ ನೋಡುವುದು ಈಗಾಗಲೇ ಆರಂಭವಾಗಿದೆ. ಕಾಲದಿಂದ ಕಾಲಕ್ಕೆ ಮಹಿಳೆ ಮತ್ತು ಪುರುಷನ ಸಾಂಸ್ಕೃತಿಕ ಚಟುವಟಿಕೆಗಳು ಬದಲಾಗುತ್ತಿವೆ. ಹೀಗಾಗಿ ಮಹಿಳೆಯರ ಸಬಲೀಕರಣದ ಪ್ರಕ್ರಿಯೆಯಲ್ಲಿ ಪುರುಷರ ಸಹಭಾಗಿತ್ವವೂ ಮುಖ್ಯವಾದದ್ದು. ಈ ದಿಕ್ಕಿನಲ್ಲಿ ಪುರುಷರ ಮನೋಭಾವನೆಗಳನ್ನು ಒಗ್ಗಿಸುವ ಕೆಲಸ ಆಗಬೇಕಾಗಿದೆ.

ಮಹಿಳಾ ಸಬಲೀಕರಣವು ಸಮಾಜದ 'ಲಿಂಗಸಂಬಂಧಿ' ಧೋರಣೆಯನ್ನು ಅವಲಂಬಿಸಿದೆ. ಮಹಿಳೆಯರ ಅಶಕ್ತತೆ, ತುಳಿತ ಮತ್ತು ಪರಾಧೀನತೆಗಳಿಗೆ ಕಾರಣವಾಗುವ ಅಂಶಗಳು ಇದರಲ್ಲಿವೆ. ಹುಟ್ಟಿನಿಂದ ಹೆಣ್ಣು ಮತ್ತು ಗಂಡು ಆಗುವುದಾದರೂ ಸಂಸ್ಕೃತಿಯು ಗಂಡು ಅಥವಾ ಹೆಣ್ಣಿನ ಲಿಂಗಾಧಾರಿತ ಪಾತ್ರ ನಿರ್ವಹಣೆ ಮತ್ತು ನಡವಳಿಕೆಗಳನ್ನು ನಿರ್ಧರಿಸುತ್ತದೆ. ಉಳಿದೆಲ್ಲಾ ಸಾಂಸ್ಕೃತಿಕ ವ್ಯತ್ಯಾಸಗಳಿಗಿಂತ ಲಿಂಗಾಧಾರಿತ ವ್ಯತ್ಯಾಸ ಬಹಳ ಅಪಾಯಕಾರಿಯಾದದ್ದು. ಲಿಂಗಾಧಾರಿತ ನೆಲೆಯಲ್ಲಿ ಸ್ತ್ರೀ-ಪುರುಷರ ಪಾತ್ರಗಳು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಆಯಾಮಗಳಲ್ಲಿ ಬದಲಾವಣೆಯನ್ನು ಬಯಸುತ್ತದೆ. ಈ ಸಂಗತಿಗಳು ಸಾಮಾಜಿಕ ಸೃಷ್ಟಿಗಳಾದ್ದರಿಂದ ಮೌಲ್ಯಗಳು, ರೂಢಿ ಸಂಪ್ರದಾಯಗಳು ಕುರಿತ ನಡವಳಿಕೆಗಳಾದ್ದರಿಂದ ಸಾಂಸ್ಕೃತಿಕ ಪರಿವರ್ತನೆ ಇಂದಿನ ಅಗತ್ಯಗಳಲ್ಲಿ ಒಂದಾಗಿದೆ.

ಚಲನಶೀಲವಾದ ಸಮಾಜದಲ್ಲಿ ಸ್ಥಳೀಯ ಮಟ್ಟದಿಂದ ಜಾಗತಿಕ ಮಟ್ಟದವರೆಗೆ ಸ್ತ್ರೀ-ಪುರುಷರನ್ನು ಕುರಿತಾದ ನಿಲುವುಗಳಲ್ಲಿ ಅಸಂಖ್ಯ ಬದಲಾವಣೆಗಳು ಜರುಗುತ್ತಿವೆ. ಒಂದು ಕಾಲದಲ್ಲಿ ಪುರುಷ ಸ್ತ್ರೀಯರಿಗಾಗಿ ಹಂಬಲಿಸುತ್ತಿದ್ದ. ಅದರಲ್ಲೂ ೧೭ ಮತ್ತು ೧೮ನೇ ಶತಮಾನಗಳಲ್ಲಿ ಪುರುಷ ಶೃಂಗಾರದ ದಾಸನಾಗಿದ್ದ. ತನ್ನ ಸಂತೋಷ, ದುಃಖ, ಮಾನಸಿಕ ಭಾವನೆಗಳನ್ನು ಹೆಣ್ಣಿನೊಂದಿಗೆ ಹಂಚಿಕೊಂಡು ಮನಸ್ಸನ್ನು ಉಲ್ಲಾಸಗೊಳಿಸುತ್ತಿದ್ದ. ೧೯ನೇ ಶತಮಾನದ ವೇಳೆಗೆ ಪುರುಷನು ಮಹಿಳೆಯನ್ನು ಕೋಮಲ, ಸೂಕ್ಷ್ಮ ಎಂದು ಭಾವಿಸತೊಡಗಿದ. ಎಲ್ಲಾ ಬಗೆಯ ಅಲಂಕಾರ, ಆಭರಣ,

ವೇಷಭೂಷಣಗಳನ್ನು ತೊಡಿಸಿ ಅಲಂಕಾರಿಕ ವಸ್ತುವಿನಂತೆ ನೋಡತೊಡಗಿದ. ಅನೇಕ ಸ್ತ್ರೀಯರು ಹಾಗೆಯೇ ರೂಪುಗೊಂಡರು. ಅವರ ಕೋಮಲತೆ ಎಷ್ಟೆಂದರೆ ಸಾಮಾನ್ಯ ಇಲಿ, ಜಿರಲೆಗಳನ್ನು ಕಂಡರೆ ಹೌಹಾರುತ್ತಿದ್ದರು. ಹೆದರಿ ನಡುಗಿಬಿಡುತ್ತಿದ್ದರು. ಮನೆ, ಪಾತ್ರೆ, ಬಟ್ಟೆ, ಪೂಜೆ ಪುನಸ್ಕಾರ, ಗಂಡು-ಮಕ್ಕಳ ಲಾಲನೆ-ಪಾಲನೆ ಇದಿಷ್ಟೇ ಪ್ರಪಂಚವೆಂದು ಸೀಮಿತಗೊಂಡರು.

ಈ ಎಲ್ಲದರ ಪರಿಣಾಮದಿಂದಾಗಿ ೨೦ನೇ ಶತಮಾನದ ಆರಂಭದ ವೇಳೆಗೆ ಮಹಿಳೆ ವಿದ್ಯಾವಂತೆಯಾಗಿ, ಸಂಶೋಧಕಿಯಾಗಿ, ಗಗನಯಾತ್ರಿಯಾಗಿ, ವೈದ್ಯೆಯಾಗಿ, ಪರ್ವತಾರೋಹಿಯಾಗಿ, ವಿಮಾನದ ಚಾಲಕಿಯಾಗಿ, ಸೈನಿಕಳಾಗಿ, ಶಿಕ್ಷಕಿಯಾಗಿ ಮಾತ್ರವಲ್ಲ ಎಲ್ಲೆಲ್ಲಿ ಪುರುಷನ ಆಧಿಪತ್ಯ ಮಾತ್ರವೇ ಇತ್ತೋ ಅಲ್ಲೆಲ್ಲಾ ಸ್ತ್ರೀಯರು ಪ್ರವೇಶಿಸಿದರು. ಅಷ್ಟೇ ಅಲ್ಲ ಚಳವಳಿಗಳಲ್ಲಿಯೂ ಧುಮುಕಿದರು. ಒಂದು ಕಾಲಕ್ಕೆ ಸ್ತ್ರೀಯರ ಬಗ್ಗೆ ಇದ್ದ ವ್ಯಾಖ್ಯೆಗಳು ಬದಲಾಗತೊಡಗಿದವು. ಹಾಗೆಯೇ ಪುರುಷನ ಬಗ್ಗೆ ಇದ್ದ ವ್ಯಾಖ್ಯೆಗಳು ಬದಲಾಗತೊಡಗಿದವು. ಪುರುಷನ ಪ್ರಾಬಲ್ಯವೇ ತರ್ಕಬದ್ಧವೆಂದು ನಂಬಿದ್ದ ಜನ ಅದೊಂದು ವಿತರ್ಕ, ಸ್ತ್ರೀ-ಪುರುಷರಿಬ್ಬರ ಪ್ರಾಬಲ್ಯವೂ ತರ್ಕಬದ್ಧವೆಂದು ಭಾವಿಸಲಾಯಿತು. ಪರಿಣಾಮವಾಗಿ ಸ್ತ್ರೀಯರಲ್ಲಿ ಸುಪ್ತವಾಗಿದ್ದ ಅನೇಕ ಉದಾತ್ತ ಭಾವನೆಗಳು, ವರ್ತನಾ ಕೌಶಲಗಳು, ಸಾಂಸ್ಕೃತಿಕ ಆಯಾಮಗಳು ಕಾಲದಿಂದ ಕಾಲಕ್ಕೆ ತೋರಗೊಡತೊಡಗಿದವು. ನಿಧಾನವಾಗಿ ಮಹಿಳಾ ಗುಣಗಳು ಕುಟುಂಬಕ್ಕೆ ಮಾತ್ರ ಸೀಮಿತವಾಗದೆ ಸಾಂಸ್ಕೃತಿಕ ಬೆಳವಣಿಗೆಯನ್ನು ರೂಪಿಸುವಲ್ಲಿ ಹರಿಯತೊಡಗಿದವು.

ಕೌಟುಂಬಿಕ ಹಾಗೂ ಸಾಮಾಜಿಕ ರಚನೆಗಳಲ್ಲಿ ಮಹಿಳೆಯರ ಸ್ಥಾನಮಾನಗಳು ಗಣನೀಯ ಬದಲಾವಣೆಗಳನ್ನು ಇಂದಿಗೂ ಕಾಣಲಾಗದ ಸ್ಥಿತಿ ಇದೆ. ಜಗತ್ತೇ ನಾಗರಿಕ ವಿಕಾಸಕ್ಕೆ ತೆರೆದುಕೊಂಡಿದ್ದರೂ ಆರ್ಥಿಕವಾಗಿ, ವೈಜ್ಞಾನಿಕವಾಗಿ ಅತ್ಯಂತ ಮುಂದುವರೆದ ದೇಶಗಳಲ್ಲಿಯೂ ಎಲ್ಲ ಬಗೆಯ ಅಸಮಾನತೆಗಳು ಜೀವಂತವಾಗಿರುವಂತೆ ಸ್ತ್ರೀ-ಪುರುಷರ ನಡುವೆ ಅಸಮಾನತೆಯಿದೆ. ಸಮಾನ ಹಕ್ಕುಗಳನ್ನು ಎಲ್ಲಾ ಮುಂದುವರೆದ ದೇಶಗಳು ಘೋಷಿಸಿಕೊಂಡಿದ್ದರೂ ಮಹಿಳೆಯರಿಗೆ ಸಾಂಸ್ಕೃತಿಕ ಹಿನ್ನೆಡೆ ಇದ್ದೇ ಇದೆ. ಆಯಾಯ ದೇಶಗಳ ಚಾರಿತ್ರಿಕ ಪರಂಪರೆ, ಸಾಮಾಜಿಕ ಕಟ್ಟುಪಾಡುಗಳು ಜಾತಿ-ವರ್ಗ-ವರ್ಣ ವ್ಯತ್ಯಾಸಗಳಂತೆ ಲಿಂಗ ವ್ಯತ್ಯಾಸವೂ ಪೀಳಿಗೆಯಿಂದ ಪೀಳಿಗೆಗೆ ನಡೆದುಕೊಂಡು ಬರುತ್ತಿದೆ. ಮನಸ್ಸನ್ನು ಹದಗೊಳಿಸಿಕೊಳ್ಳಲು ಬಹಳ ಕಾಲ ಬೇಕಾಗಬಹುದು.

ಫ್ರಾನ್ಸ್‌ನಲ್ಲಿ ೧೯೪೪ರವರೆಗೂ ಮತಾಧಿಕಾರವನ್ನು ಸ್ತ್ರೀಯರಿಗೆ ನೀಡಿರಲಿಲ್ಲ. ಆದರೆ ೧೯೩೬ರ ವೇಳೆಗೆ ಮೊದಲೆ ಇಬ್ಬರು ಸಚಿವೆಯರು ಫ್ರಾನ್ಸಿನ ಸರ್ಕಾರದಲ್ಲಿದ್ದರು. ಫ್ರಾನ್ಸಿನಲ್ಲಿ ಸ್ತ್ರೀಯರು ಕುಟುಂಬದಲ್ಲೇ ಅಲ್ಲದೇ ಸಾಂಸ್ಕೃತಿಕವಾಗಿ ಉನ್ನತ ಸ್ಥಾನಮಾನವನ್ನು ಪಡೆದವರಾಗಿದ್ದಾರೆ. ಆ ದೇಶವು ರಾಜಕಾರಣಕ್ಕೆ ಅನೇಕ ಗಣ್ಯ ಮಹಿಳೆಯರು ಬರಲು ಅವಕಾಶ ನೀಡಿ ಪ್ರೋತ್ಸಾಹಿಸಿದೆ; ಆದರೆ ಮಹಿಳೆಯರ ರಾಜಕೀಯ ಅವಕಾಶವೊಂದೆ ಅವರ ಸಾಮಾಜಿಕ ಸ್ಥಿತಿಯನ್ನು ಸುಧಾರಿಸಬಲ್ಲದು ಎಂಬುದು ಸುಳ್ಳಾಗಿದೆ. ಧೋರಣೆಗಳು ಬದಲಾದಂತೆ ಯುವ ಮಹಿಳೆಯು ಮದುವೆಯಾದ ಕೂಡಲೆ ಮೊದಲು ಮಗುವಿಗೆ ತಾಯಿಯಾಗುವುದೇ ಬದುಕಿನ ಪರಮ ಧ್ಯೇಯ ಎಂದು ಭಾವಿಸಿದ್ದಳು. ಕಾಲಾನಂತರ ಅದೊಂದು ಬದುಕಿನ ಭಾಗ ಹಿಂದೆ ಕೇವಲ ಗೃಹಕೃತ್ಯಗಳಲ್ಲಿ ತಲ್ಲೀನಳಾಗಿದ್ದ ಮಹಿಳೆಯು ಇಂದು ಸಾಂಸ್ಕೃತಿಕ ಎಚ್ಚರಗಳಿಂದ ಜವಾಬ್ದಾರಿ ಅರಿತ ಮಹಿಳೆಯಾಗಿ ರೂಪುಗೊಳ್ಳುತ್ತಿದ್ದಾಳೆ. ಮಹಿಳೆಯಾದವಳು ತನ್ನ ವೈಯಕ್ತಿಕ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಆವಶ್ಯಕವಾದ ಅಧಿಕ ಆರ್ಥಿಕ ಹೊರೆಯನ್ನು ಸರಿದೂಗಿಸುವ ಉದ್ದೇಶದಿಂದ ದುಡಿಮೆಯ ಕಡೆ ಒಲವು ತೋರುತ್ತಿದ್ದಾಳೆ.

ಪ್ರತಿಯೊಂದು ಸಮಾಜವು ಒಂದು ಸಾಮಾಜಿಕ ವ್ಯವಸ್ಥೆಯನ್ನು ಹೊಂದಿರುತ್ತದೆ. ಹಾಗೆಯೇ ಪ್ರತಿಯೊಂದು ಕುಟುಂಬವೂ ಒಂದು ಕೌಟುಂಬಿಕ ವ್ಯವಸ್ಥೆಯನ್ನು ಹೊಂದಿರುತ್ತದೆ. ಆಯಾ ಕುಟುಂಬದ ಸಾಂಸ್ಕೃತಿಕ ಉಳಿವಿಗೆ ಮತ್ತು ಬೆಳವಣಿಗೆಗೆ ಅದರ ಎಲ್ಲ ಸದಸ್ಯರೊಡನೆ ಜವಾಬ್ದಾರಿಯನ್ನು ಹಂಚಿಕೊಂಡಿರುತ್ತದೆ. ಅವು ಸ್ತ್ರೀ–ಪುರುಷರೆಂಬ ಭೇದವಿಲ್ಲದೆ ಹಂಚಿಕೆಯಾಗಿರುತ್ತದೆ. ಆದ್ದರಿಂದ ಅದರಲ್ಲಿ ಪ್ರತಿಯೊಬ್ಬರೂ ತಮ್ಮ ತಮ್ಮ ಜವಾಬ್ದಾರಿಗಳನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಪರಸ್ಪರ ಅರಿಯುವ, ಆಲೋಚನೆಗಳನ್ನು ಹಂಚಿಕೊಳ್ಳುವ, ಜವಾಬ್ದಾರಿಗಳನ್ನು ನಿರ್ವಹಿಸುವ, ಲೋಕಹಿತವನ್ನು ಬಯಸುವ ಮನೋಭಾವಗಳು ಹಠವಾದಿತನದಿಂದ ಬರುವುದಿಲ್ಲ; ಅರ್ಥಮಾಡಿಕೊಳ್ಳುವುದರಿಂದ ಬರುತ್ತದೆ. ಕಾಲ, ಸಂದರ್ಭ ಮತ್ತು ಬದುಕಿನ ಅನಿವಾರ್ಯತೆಗಳೆಲ್ಲವೂ ಸ್ತ್ರೀಯರ ಮತ್ತು ಪುರುಷರ ಸಾಂಸ್ಕೃತಿಕ ಪಾತ್ರಗಳನ್ನು ನಿರ್ಣಯಿಸುತ್ತವೆ. ತಮ್ಮ ತಮ್ಮ ಪಾತ್ರ ನಿರ್ವಹಣೆಗಳಿಗೆ ಹೊಂದಿಕೊಂಡು ಬಾಳುವುದು ಬಹಳ ಮುಖ್ಯವಾದದ್ದು.[೧]

---

೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಪುಟ ಸಂಖ್ಯೆ ೧೮೦-೨೦೨, ಕರ್ತೃ: ಡಾ. ಹಾಲತಿ ಸೋಮಶೇಖರ್.

ಆಧುನಿಕ ಸ್ತ್ರೀವಾದಿಗಳು ಮಹಿಳೆಯರ ಇಂದಿನ ಎಲ್ಲಾ ಸ್ಥಿತಿಗತಿಗಳಿಗೂ ಪುರುಷರೇ ಕಾರಣರು ಎಂಬುದಾಗಿ ಪುರುಷರನ್ನು ಸ್ತ್ರೀಯರ ಎದುರು ನಿಲ್ಲಿಸಿ ನಕಾರತ್ಮಕ ಧೋರಣೆಯಿಂದ ಹಿಡಿಶಾಪ ಹಾಕಿದರೆ ಯಾವ ಪ್ರಯೋಜನವೂ ಇಲ್ಲ. ಅದಕ್ಕೆ ಬದಲು ಒಟ್ಟಾರೆ ನಮ್ಮೆದುರು ತೆರೆದುಬಿದ್ದಿರುವ ಬದುಕಿನಲ್ಲಿ ಅಸಮಾನತೆಯನ್ನು ಅವಲೋಕಿಸಿ ಹೆಣ್ಣು-ಗಂಡುಗಳು ಒಂದಾಗಿರಲು ಇರುವ ಸಾಮಾಜಿಕ ಬದುಕಿನ ಆತಂಕಗಳನ್ನು ಪರಿಹರಿಸಿಕೊಂಡು ನಮ್ಮ ಸಂದರ್ಭದ ಸಾಂಸ್ಕೃತಿಕ ಪರಿಸರದಲ್ಲಿ ಸ್ತ್ರೀವಾದವು ಸ್ತ್ರೀ-ಪುರುಷರಿಬ್ಬರನ್ನು ಒಳಗೊಳ್ಳುವ ಸಮಾಜದ ಚಿಂತನೆಯಾಗಿ ಆಕಾರ ಪಡೆಯಬೇಕಿದೆ.

**೩.೪. ಸಾಂಸ್ಕೃತಿಕ ರಂಗಭೂಮಿಯಲ್ಲಿ ಮಹಿಳೆ**

ಕಲೆಯೊಂದು ಅರಳುವುದು ಯಾವುದೇ ಒತ್ತಡಗಳಿಲ್ಲದಾಗ, ಸಾಮೂಹಿಕ ಪರಿಶ್ರಮದಿಂದ ಅರಳುವ ರಂಗಭೂಮಿಯಂಥ ಕಲೆ ಹರಕೆಯ 'ಕೊಂಡವನ್ನೇ ಹಾಯ್ದು ಬಂದಿದೆ. ಸ್ತ್ರೀ-ಪುರುಷರು ಸರಿಸಮವಾಗಿ ಭಾಗವಹಿಸಿ ಎಲ್ಲಾ ಕಲೆಗಳ ಸಮಾವೇಶದಲ್ಲಿ ಅರಳಬೇಕಾದ ಕಲೆ ರಂಗ 'ಹಿತೈಷಿ'ಗಳೆಂದು ಹೇಳಿಕೊಂಡ ಕೆಲವರ ಸ್ವತ್ತಾಗಿ ಅವರು ಹಾಕಿದ ನಿಯಮದಂತೆ ನಡೆಯಲಾರದೆ ನಲುಗಿ ನಲುಗಿ ಮತ್ತೆ ಮತ್ತೆ ಚಿಗುರುತ್ತ ಬಂದಿದೆ. ಒಟ್ಟಾರೆ ಸಾಂಸ್ಕೃತಿಕ ರಂಗಭೂಮಿಯಲ್ಲಿ ಸ್ತ್ರೀ ಕುರಿತ ಒಂದು ಹುಡುಕಾಟ, ಪಕ್ಷಿನೋಟವನ್ನು ಕಾಣಬಹುದು.

ಸಾಂಸ್ಕೃತಿಕ ರಂಗಭೂಮಿಯಲ್ಲಿ ಮಹಿಳೆಯರನ್ನು ಹುಡುಕುತ್ತ ಹೊರಟಾಗ ಹಲವು ಅತ್ಯಾಶ್ಚರ್ಯಕರ ಅಂಶಗಳು ಬೆಳಕಿಗೆ ಬರುತ್ತವೆ. ಮೇಲುನೋಟಕ್ಕೆ ಮಹಿಳೆಯರ ಪ್ರವೇಶದಿಂದ ರಂಗಭೂಮಿಯಲ್ಲಿದ್ದ ಒಗ್ಗಟ್ಟಿಗೆ ಧಕ್ಕೆ ಬಂತು, ನೈತಿಕ ಮೌಲ್ಯಗಳು ಕುಸಿದವು ಎಂದು ಕೆಲವು ಉದಾಹರಣೆಗಳ ಸಹಿತ ಹೇಳುವುದುಂಟು. ದಾಖಲೆಗಳ ಪ್ರಕಾರ ಮಹಿಳೆಯನ್ನು ಪಕ್ಕಕ್ಕೆ ಸರಿಸಲಾಗಿದೆ. ಆಕೆಯ ಕಲೆಯನ್ನು ಕೊಡುಗೆ ಎಂದು ಪರಿಗಣಿಸದೆ ನಿಕೃಷ್ಟವಾಗಿ ಕಾಣಲಾಗಿದೆ. ಆದರೆ ಸಾಂಸ್ಕೃತಿಕ ರಂಗಭೂಮಿ ಉಳಿಯಬೇಕಾದರೆ ಸ್ತ್ರೀ ಅನಿವಾರ್ಯ ಅನ್ನುವಂಥ ಪ್ರಸಂಗಗಳಲ್ಲಿ ತನ್ನ ಧೋರಣೆಗಳನ್ನು ಬದಲಾಯಿಸಿಕೊಂಡು, ಜಾಣ ತೀರ್ಮಾನಗಳನ್ನು ವ್ಯಾಖ್ಯಾನ ಮಾಡಲಾಗಿದೆ.

ಸಾಮಾನ್ಯವಾಗಿ ಕಂಪನಿಯ ಒಡತಿಯರಾಗಿ, ರಂಗ ಕಲಾವಿದೆಯರಾಗಿ ಸ್ತ್ರೀಯರ ಕೊಡುಗೆ ಏನೆಂಬುದನ್ನು ಹೇಳದೆ ಮರೆಮಾಚಲಾಯಿತು. ರಂಗೇತಿಹಾಸದಲ್ಲಿ

ಕೂಡಾ ಇಂಥ ಸಂಗತಿಗಳಿಗೆ ಒಂದೋ ಎರಡೋ ವಾಕ್ಯಗಳಿಗಿಂತ ಹೆಚ್ಚು ಸ್ಥಳಾವಕಾಶವಿಲ್ಲ. ಆದರೆ ಸ್ತ್ರೀವೇಷವನ್ನು ನಿಭಾಯಿಸುವ ಪುರುಷ ಕಲಾವಿದರ ಬಗ್ಗೆ ರಂಗುರಂಗಾಗಿ ಹೇಳಲಾಗಿದೆ. ಮೋಹ ಪರವಶತೆಯಿಂದ ಮಾತನಾಡುವವರೆಗೆ ಅದು ಸಾಗುತ್ತದೆ. ಕನ್ನಡ ರಂಗಭೂಮಿಯಲ್ಲೂ ಕೂಡಾ ಈ ವೈಭವ ಮೆರೆದಿದೆ. ಮೊದಮೊದಲು ಸಾಂಸ್ಕೃತಿಕ ರಂಗಪ್ರವೇಶ ಮಾಡಿದ ಮಹಿಳೆಯರ ಬಗ್ಗೆ ಗುರುತಿಸಿದ, ಸರಿಯಾಗಿ ಹೇಳಿದ ಉದಾಹರಣೆಗಳು ಇಲ್ಲವೆಂದೇ ಹೇಳಬಹುದು. ಪುರುಷ ಪಾತ್ರಗಳನ್ನು ಸ್ತ್ರೀಯರೇ ನಿರ್ವಹಿಸಿದ ಹಿಂದಿನ ಕಾಲದ ಪ್ರಸಂಗದಲ್ಲಿ ಅಪಹಾಸ್ಯ ಮಾಡಲಾಗಿದೆ.

ಪ್ರಸಿದ್ಧ ರಂಗೇತಿಹಾಸಕಾರ ಅಂಬಜಿ ಕುಲಕರ್ಣಿಯವರು ಮಹಿಳೆಯಾದವರು ರಂಗಪ್ರವೇಶ ಮಾಡಿದರೆ ಏನಾಗುತ್ತದೆಂಬುದನ್ನು ಹೀಗೆ ಊಹಿಸುತ್ತಾರೆ. ಸ್ತ್ರೀಯೊಬ್ಬಳು ರಾಧೆಯಾಗಿ ಎದುರಿಗೆ ನಿಂತರೆ ಸ್ತ್ರೀ-ಪುರುಷರು ಮೋಹಪರವಶರಾಗಿಬಿಡುತ್ತಾರೆ. ಪರದೆ ಮೇಲೆದ್ದರೂ ರಂಗಪ್ರವೇಶ ಮಾಡಲಾಗದೆ ಹೋಗುತ್ತಾರೆ. ಪ್ರೇಕ್ಷಕರು ರೊಚಿಗೆದ್ದು ಮಾಲೀಕರನ್ನು ತರಾಟೆಗೆ ತೆಗೆದುಕೊಳ್ಳಬಹುದು ಮತ್ತು ಪುರುಷರ ಸ್ತ್ರೀ ಪಾತ್ರ ಮಾತ್ರ 'ಕಲೆ'ಯಾಗುತ್ತದೆ. ಸ್ತ್ರೀಯರೇ ಸ್ತ್ರೀ ಪಾತ್ರವಹಿಸದರೆ 'ಕಲೆ' ಆಗುವುದಿಲ್ಲ ಎಂದೂ ಹೇಳುತ್ತಾರೆ. ಆದರೆ ಕಾಲ ಎಲ್ಲವನ್ನು ತಿರುವು ಮುರುವು ಮಾಡಬಲ್ಲದು. ಸಾಂಸ್ಕೃತಿಕವಾದ ಈ ರಂಗಭೂಮಿಯಲ್ಲಂತೂ ತೀವ್ರ ಬದಲಾವಣೆಗಳು ಬಂದವು. ರಂಗಭೂಮಿಯಲ್ಲಿ ತಾವು ಅದುವರೆಗೆ ಕೊಂಡಾಡಿಕೊಂಡು ಬಂದ ಪುರುಷರ ಸ್ತ್ರೀ ವೇಷವೇ ಎಲ್ಲವೂ ಅಲ್ಲ ಎಂದು ಗ್ರಹಿಸತೊಡಗಿದರು. ಸಾಂಸ್ಕೃತಿಕವಾಗಿ ಗೌರವದ ಸ್ಥಾನದಲ್ಲಿ ಆಕೆ ನಿಲ್ಲಬಲ್ಲವಳಾಗಿದ್ದಳು.

ಸಾಂಸ್ಕೃತಿಕ ರಂಗಭೂಮಿಯ ಪ್ರೇಕ್ಷಕ ಪುರುಷ-ಸ್ತ್ರೀಯರ ಅಸಹಜತೆಯಿಂದ ಬೇರೆಯಾದ ಸ್ತ್ರೀಯರೇ ನಿರ್ವಹಿಸುವ ಪಾತ್ರಗಳನ್ನು ಬಯಸುತ್ತಿದ್ದ. ಸ್ತ್ರೀಯರ ಪ್ರವೇಶ ಅನಿವಾರ್ಯ ಎಂಬ ಹಿನ್ನೆಲೆಯಲ್ಲಿ ಬೇಕೆ? ಬೇಡವೇ? ಎಂಬುದೇ ಒಂದು ದೊಡ್ಡ ಚರ್ಚೆ. ಕೆಲವು ಪ್ರದೇಶಗಳ ಸಾರ್ವಜನಿಕರು, ರಂಗತಜ್ಞರುಗಳು ರಂಗಭೂಮಿಯ ಉಳಿವಿನ ಪ್ರಶ್ನೆಗಳಲ್ಲಿ ಸಾಂಸ್ಕೃತಿಕ ರಂಗಭೂಮಿಯ ಉಳಿವಿಗಾಗಿ ಮಹಿಳೆಯರುಗಳ ಪ್ರವೇಶ ಅಗತ್ಯ ಎಂಬ ತೀರ್ಮಾನಕ್ಕೆ ಬಂದರು. ಎಲ್ಲಕ್ಕಿಂತ ಮಿಗಿಲಾಗಿ ಬರಬರುತ್ತ ಪುರುಷರ ಸ್ತ್ರೀ ಪಾತ್ರಗಳು ಅಶ್ಲೀಲ ಅಸಭ್ಯದ ಮಟ್ಟ ಮುಟ್ಟಿದ್ದವು. ಅಂಥದೆ

ನಾಟಕಗಳು, ಸಂಭಾಷಣೆ ರಚನೆಯಾಗತೊಡಗಿತ್ತು. ಇವನ್ನೆಲ್ಲ ತಪ್ಪಿಸಲು ಮಹಿಳೆಯರು ರಂಗಪ್ರವೇಶ ಮಾಡಲಿ, ಆದರೆ ನೈತಿಕ ಮೌಲ್ಯ ಕುಸಿಯುತ್ತದೆಂಬ ಚಿಂತೆ ಅವರಿಗಾಯಿತು.

ಅವರಾಗಲೇ ವಿದ್ಯಾವಂತ ಸ್ತ್ರೀಯರನ್ನು 'ಕುಲೀನ'ರೆಂದು ಪರಿಗಣಿಸಿದ್ದರು. ಸ್ತ್ರೀಯೊಬ್ಬಳು ರಂಗದ ಮೇಲೆ ಕೂಡಾ ಪರಪುರುಷನನ್ನು 'ಪತಿ' ಎಂದು ಭಾವಿಸುವುದಾಗಲಿ, ಹಾಗೆ ಅಭಿನಯಿಸುವುದಾಗಲೀ ಅನೈತಿಕ ಸಂಗತಿಯೇ ಆಗುತ್ತದೆ ಎಂಬ ನಂಬಿಕೆ ಮತ್ತೂ ಮುಂದೆ ಹೋಗಿ ಒಂದು ವೇಳೆ ಅಭಿನಯಿಸುವ ದಿನಗಳಲ್ಲಿ ಆಕೆ ಬಲಿಷ್ಠೆಯಾದರೆ ಎಂಥ ಕೆಟ್ಟ ಪುರುಷನೇ ಆದರೂ ಆಕೆಯನ್ನು ಮುಟ್ಟುವಂತಿಲ್ಲ, ಮಾತಾಡುವಂತಿಲ್ಲ. ಸಾಂಸ್ಕೃತಿಕ ರಂಗಕಲೆ ಉಳಿಯಬೇಕಾದರೆ ಸ್ತ್ರೀಯ ಪ್ರವೇಶ-ವಾಗಲಿ, ಆದರೆ ಕುಲೀನ ಸ್ತ್ರೀಯರಾದರೆ ಅವರ ನೈತಿಕ ಮೌಲ್ಯ ನಾಶವಾಗುತ್ತದೆ. ಆದ್ದರಿಂದ ವೇಶ್ಯೆಯರು, ವಿಧವೆಯರು ರಂಗಕ್ಕೆ ಬಂದರೆ ಸರಿಯಾದೀತು ಎಂದುಕೊಂಡರು. ಕುಲೀನ ಸ್ತ್ರೀಯರು ರಂಗಕ್ಕೆ ಬಂದರೆ ಪುರುಷನ ನೈತಿಕತೆಗೆ ಧಕ್ಕೆಯಿಲ್ಲ ಎಂಬ ಸಮಾಧಾನ ಒಂದೆಡೆಯಾದರೆ ವೇಶ್ಯೆಯರಿಗೆ ನೀವು ನೀತಿವಂತರಾಗಬೇಕು. ಒಬ್ಬನೆ ಪುರುಷನಿಗೆ ನಿಷ್ಠರಾಗಿರಬೇಕು ಅಥವಾ ಮತ್ತೊಂದು 'ಕುಲೀನ' ವಂಶದ ಹುಟ್ಟಿಗೆ ಕಾರಣವಾಗುತ್ತೇನೆಂಬ ಮನಸ್ಸುಳ್ಳವಳಾಗಿರಬೇಕು ಎಂದು ಬೋಧಿಸಿದರು.

ಮಹಿಳೆಯರಿಗೆ ಸಾಂಸ್ಕೃತಿಕ ರಂಗಪ್ರವೇಶ ಅವರದೇ ಅಪೇಕ್ಷೆ, ಅಭಿವ್ಯಕ್ತಿಗಾಗಿ ತುಡಿತ ಎಂಬ ಅಂಶವೇ ಇಲ್ಲೆಲ್ಲೂ ಕಾಣುವುದಿಲ್ಲ. ಮತ್ತೆ ಸ್ತ್ರೀ ಪಾತ್ರವೆಂದರೆ ಹೀಗೆ ಇರಬೇಕೆಂಬ ಪುರುಷನ ಆಲೋಚನೆಗಳೇ ಇಲ್ಲೂ ಹೇರಲ್ಪಟ್ಟವು. ಅತಿಯಾದ ಅಲಂಕಾರ, ಒಯ್ಯಾರ, ಸಂಗೀತ ಭಾವ-ಭಂಗಿಗಳು ಇಲ್ಲವೆ ಅತಿದೈನ್ಯ – ಅಳು ಆಕೆಯ ನಿರ್ವಹಣೆಗೆ ಮೀಸಲಾದವು. ಒತ್ತಾಯಪೂರ್ವಕವಾಗಿ ಒಂದು ಗೊತ್ತಾದ ಬದುಕಿಗೆ ತನ್ನನ್ನು ಹೊಂದಿಸಿಕೊಂಡು 'ಕುಲೀನ'ಳಾಗಿ ರಂಗ ತಯಾರಿ ಪಡೆದ ಸ್ತ್ರೀಯರು ಇಂದೂ ಇದ್ದಾರೆ. ಪುರುಷರು ಸ್ತ್ರೀ ವೇಷ ಹಾಕಿದ್ದರಿಂದ ಆತನಿಗೆ ಇದು ಅಪಮಾನದ ಸಂಗತಿ ಆಗಿರಲಾರದು. ದೇವರುಗಳನ್ನೇ ಸಾಂಸ್ಕೃತಿಕ ಈ ರಂಗಭೂಮಿಯಲ್ಲಿ ವೈಭವೀಕರಿಸಿ ತೋರಿಸಿದ ಬಗ್ಗೆ ಅಪೇಕ್ಷಿಸುತ್ತಾರೆ. ಮುಖ್ಯವಾಗಿ ಇದೆಲ್ಲವೂ ಸಾಂಸ್ಕೃತಿಕ

ರಂಗಭೂಮಿಯಲ್ಲಿ ಮಹಿಳೆಯರನ್ನು 'ಬಳಸಿದ ವೈಖರಿ ರಂಗಪ್ರಿಯರು, ರಂಗಾಸಕ್ತರು, ರಂಗಭೂಮಿಯ ಹಿತೈಷಿಗಳು ಕಾಲಕಾಲಕ್ಕೆ ಸಿದ್ಧಾಂತವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ತಿರುಚಿ ವ್ಯಾಖ್ಯಾನಿಸುತ್ತ, ಇದೇ ಸ್ತ್ರೀ ಸಮುದಾಯದ ಅರುಳುವ, ಅರಳಿಸುವ ಮನಸ್ಸನ್ನೇ ಕೊಂದರು.[೧]

ಬಹು ಪ್ರಯಾಸದಿಂದ ಕಂಪನಿ ಕಟ್ಟಿದವರ ಬಗ್ಗೆ, ಮೊದಮೊದಲು ರಂಗಪ್ರವೇಶ ಮಾಡಿದ ಸ್ತ್ರೀಯರ ಬಗ್ಗೆ ಗುರುತಿಸಿದ, ಸರಿಯಾಗಿ ಹೇಳಿದ ಉದಾಹರಣೆಗಳು ಇಲ್ಲವೆಂದೇ ಹೇಳಬಹುದು. ಒಂದು ವೇಳೆ ಪ್ರಸ್ತಾಪಿಸಿದರೂ ಅವರು 'ವೇಶ್ಯೆ'ಯರು ಎಂಬ ಧೋರಣೆಯ ಮಾತು. ಆ ಮಾತೂ ಆಡಲಾಗದೆ 'ದೇವದಾಸಿ' ಎಂಬ ಪದ ಪ್ರಯೋಗದಲ್ಲಿ ಗಾಂಭೀರ್ಯ ಕಂಡುಕೊಳ್ಳುವುದುಂಟು. ಸೂಳೆ, ವೇಶ್ಯೆ ಬಳಸಿದರೆ ಒರಟು ಎಂಬ ಕಾರಣ ಇರಬಹುದು. ಪುರುಷ ಪಾತ್ರಗಳನ್ನು ಸ್ತ್ರೀಯರೇ ನಿರ್ವಹಿಸಿದ ಹಿಂದಿನ ಕಾಲದ ಪ್ರಸಂಗದಲ್ಲಿ ಅಪಹಾಸ್ಯ ಮಾಡಲಾಗಿದೆ. ಪುರುಷರ ಸ್ತ್ರೀವೇಷ ವಿಶೇಷ ಮನ್ನಣೆಗೆ ಪಾತ್ರವಾಗುವುದಾದರೆ ಸ್ತ್ರೀಯರ ಪುರುಷ ವೇಷವೇಕೆ ಅಪಹಾಸ್ಯಕ್ಕೆ ಈಡಾಗುತ್ತದೆ? ಇದೆಲ್ಲದರ ಹಿಂದೆ ಪುರುಷ ಪ್ರಧಾನ ಸಮಾಜದ ಸ್ವಾರ್ಥವೇ ಅಡಗಿದೆ.

ಮಹಾರಾಷ್ಟ್ರ ರಂಗಭೂಮಿ ಬಹುತೇಕ ಲೋಕಮಾನ್ಯ ತಿಲಕರ ಸಿದ್ಧಾಂತಗಳನ್ನು ಸ್ವೀಕರಿಸಿತು. ತಿಲಕರ ಸಿದ್ಧಾಂತಗಳನ್ನು ಸ್ವೀಕರಿಸಿತು. ತಿಲಕರ ಒತ್ತು ದೇಶಪ್ರೇಮಕ್ಕೆ, ಸ್ವಾತಂತ್ರ್ಯಕ್ಕೆ ಅವರು ಸಮಾಜ ಸುಧಾರಣೆಯನ್ನು ಅದರ ಜೊತೆಗೆ ಸೇರಿಸಿಕೊಳ್ಳಲಿಲ್ಲ. ಹಾಗೆ ಎರಡನ್ನೂ ಗುರಿಯಾಗಿಟ್ಟುಕೊಂಡು ಕೆಲಸ ಮಾಡಿದ ಭಂಡಾರ್ಕರ್, ಅಗರ್‌ಕರ್ ಮೊದಲಾದವರ ಪ್ರಭಾವ ರಂಗಭೂಮಿಯ ಮೇಲೆ ಆದಂತಿಲ್ಲ. ತಿಲಕರು ಸ್ತ್ರೀ ವಿರೋಧಿ ಅಲ್ಲದಿರಬಹುದು, ಪರವಾಗಿಯಂತೂ ಇರಲಿಲ್ಲ. ಎಂದೂ ಆಕೆಗೆ ಕನಿಷ್ಠ ಸ್ಥಾನವೇ ಅವರ ದೃಷ್ಟಿಯಲ್ಲಿ. ಆ ದಿನಗಳಲ್ಲಿ ರಚಿತವಾದ ನಾಟಕಗಳಲ್ಲಿ ಸಮಾಜ ಸುಧಾರಣೆಯ ಅಂಶಗಳು ಇದ್ದರೂ ಅವು ಗಂಭೀರವಾಗಿ ನಿರೂಪಿತವಾಗುತ್ತಿರಲಿಲ್ಲ. ಸುಧಾರಣೆಯ ಮಾತೆಲ್ಲ ಪಾಶ್ಚಾತ್ಯ ಪ್ರಭಾವದಿಂದ ಬಂದದ್ದು. ಅದು ಒಮ್ಮುಖವಾದ ವರ್ಣನೆ ಎಂತಲೇ ಭಾವಿಸಲಾಗಿತ್ತು ಮತ್ತು ಅಂಥ ಪಾತ್ರ–ಸನ್ನಿವೇಶಗಳ ಚಿತ್ರಣಗಳು

---

೧. ಮಹಿಳಾ ಲೋಕ, ಪುಟ ಸಂಖ್ಯೆ ೧೧೫–೧೨೦, ಸಂಪಾಕರು: ನೇಮಿಚಂದ್ರ.

ಅಧಿಕವಾಗಿ ಇದ್ದವು. ಆ ದಿನಗಳಲ್ಲಿ ಸಮಾಜ ಸುಧಾರಣೆಗೆ ಹೆಸರಾದ ಜಸ್ಟಿಸ್ ರಾನಡೆಯಂಥವರು ವಿಧವಾ ವಿವಾಹವನ್ನು ಬೆಂಬಲಿಸಿದವರು. ಆದರೆ ಅವರು ಪುಟ್ಟ ಹುಡುಗಿಯನ್ನು ಮದುವೆಯಾದರು. ಇಂಥ ಸಂಗತಿಗಳು ಪ್ರಗತಿಪರ ಚಿಂತನೆಯನ್ನು ಸಾರಾಸಗಟಾಗಿ ಮೂದಲಿಸಲು ನೆರವಿಗೆ ಬಂದವು. ರಂಗದ ಮೇಲೆ ಇಂಥ ವಿಷಯಗಳ ಚರ್ಚಾಕೂಟವೇ ಇದ್ದಂತೆ ನಾಟಕಗಳು ರಚಿತವಾದದ್ದಿದೆ. ಕನ್ನಡದಲ್ಲಿ ಶ್ರೀರಂಗರೂ ಇಂಥ ನಾಟಕ ಬರೆದಿದ್ದಾರೆ. ಸಮಾಜ ಸುಧಾರಕರ ಮುಖವಾಡಗಳನ್ನು ಕಳಚಿ ಹಾಕುವ ರಭಸದಲ್ಲಿ ಪ್ರೊಗ್ರೆಸಿವ್ ಆದುದನ್ನೆಲ್ಲ ನಿರಾಕರಿಸುವ ಸಡಗರವೆ ವಿಜೃಂಭಿಸಿತು. ಆ ದಿನಗಳಲ್ಲಿಯ ಪ್ರಗತಿಪರ, ಸ್ತ್ರೀಪರ ಎಂಬ ಹಣೆಪಟ್ಟಿ ಹೊತ್ತ ನಾಟಕಗಳು ಇವತ್ತಿನ ನಿಕಷದಲ್ಲಿ ಕೇವಲ ತೋರಿಕೆ, ಔದಾರ್ಯ, ಅನುಕಂಪಗಳಂತೆ ಕಾಣುತ್ತವೆ. ಅವು ಇರುವ ಹಾಗೆ ಸ್ವೀಕರಿಸುವುದು ತುಸು ಕಷ್ಟವೇ ಆಗುತ್ತದೆ.

೧೯೧೨ರಲ್ಲಿ ನಡೆದ ರಂಗಭೂಮಿ ಕುರಿತ ಸಮ್ಮೇಳನವೊಂದರಲ್ಲಿ ಮಧುರಬಾಯಿ ಎಂಬ ಕಲಾವಿದೆ ಪುರುಷರು ಸ್ತ್ರೀಪಾತ್ರಗಳನ್ನು ನಿರ್ವಹಿಸುವುದನ್ನು ಕುರಿತು ಆ ಹಾವಭಾವ, ಒಯ್ಯಾರಗಳೆಲ್ಲ ಅಸಹ್ಯವಾಗಿವೆ. ಯಾವ ಸ್ತ್ರೀಯೂ ಹಾಗೆ ವರ್ತಿಸುವುದಿಲ್ಲ ಎನ್ನುತ್ತಾರೆ ಮತ್ತು ಆ ನಟರು ಕುತ್ತಿಗೆಯಿಂದ ತೀರಾ ಕೆಳಕ್ಕೆ ಇರುವ ರವಿಕೆಯನ್ನು ತೊಡುವುದಾಗಲೀ, ಕುಚ ಪ್ರದೇಶವನ್ನು ಅಸಭ್ಯವಾಗಿ ಎತ್ತಿ ತೋರುವಂತೆ ಸೆರಗು ಹಾಕುವುದಾಗಲೀ, ಮೈ ಕುಣಿಸುವುದಾಗಲೀ ಒಂದು ಕೆಟ್ಟ 'ಅಣಕು' ಅನ್ನಬಹುದಲ್ಲದೆ ಅದು ಯಾವುದೇ ಬಗೆಯ ಸ್ತ್ರೀಯನ್ನು ಹೋಲುವುದಿಲ್ಲ ಎನ್ನುತ್ತಾರೆ. ಚಿಕ್ಕಪ್ರಾಯದ ಹುಡುಗರು ಪ್ರೌಢೆಯರ ಪಾತ್ರವಹಿಸುವುದು ಆ ಪಾತ್ರದ ಘನತೆಯನ್ನು ತುಂಬಿ ಕೊಡಲಾಗದೆ ಕೆಟ್ಟಪ್ರದರ್ಶನವಾಗುತ್ತದೆ ಮತ್ತು ಸ್ತ್ರೀಪಾತ್ರವೆಂದರೆ ಕೇವಲ ಮೋಹಕತೆ, ಪ್ರಚೋದಕ ಭಂಗಿ ಎಂದು ಭಾವಿಸುವುದು, ಆಭರಣಗಳನ್ನೆಲ್ಲ ಧರಿಸಿ ಒಯ್ಯಾರ ಮಾಡಿದರೆ ಉತ್ತಮ ಸ್ತ್ರೀ ಪಾತ್ರ ನಿರ್ವಹಿಸಿದಂತೆ ಎಂದು ಭಾವಿಸುವ ಪುರುಷರ ಈ ಅಸಹ್ಯಕರ ವರ್ತನೆಯನ್ನು ಸ್ತ್ರೀಯರಂತೂ ಒಪ್ಪುವುದು ಸಾಧ್ಯವೇ ಇಲ್ಲ ಎನ್ನುತ್ತಾರೆ.[೧]

---

೧. ಮಹಿಳಾ ಲೋಕ, ಪುಟ ಸಂಖ್ಯೆ ೧೧೮, ಸಂಪಾಕರು: ನೇಮಿಚಂದ್ರ.

ಮರಾಠಿ ರಂಗಭೂಮಿಯ ಸ್ವರ್ಣಯುಗವೆಂದು ಗುರುತಿಸಲಾದ ೧೯೦೩ರಿಂದ ೧೯೧೫ರವರೆಗೆ ಬಾಲಗಂಧರ್ವ, ಕೇಶವರಾವ್ ಭೋನ್ಸಲೆ, ವಿಷ್ಣು ಮೊದಲಾದವರು ಸ್ತ್ರೀಪಾತ್ರ ನಿರ್ವಹಿಸುತ್ತಿದ್ದರು. ಅದೆಂಥ ಮರುಳು ಕವಿದಿತ್ತೆಂದರೆ ಸ್ತ್ರೀಪಾತ್ರ ಸ್ತ್ರೀಯರೇ ನಿರ್ವಹಿಸುವ ಬಗ್ಗೆ ಆಗ ಯಾರು ಯೋಚಿಸಿಯೂ ಇಲ್ಲ. ಆ ಕಾಲಘಟ್ಟದಲ್ಲಿ ಅಪ್ಪಿತಪ್ಪಿ ಸ್ತ್ರೀಯರ ರಂಗಪ್ರವೇಶವಾಗಿದ್ದರೆ, ಅದು ವೇಶ್ಯೆಯರೆ ಎಂದು ನಂಬಲಾಗಿತ್ತು. ಈ ಮಹಾರಾಷ್ಟ್ರದ ರಂಗಭೂಮಿ ಪತ್ರಿಕೆಯಲ್ಲಿ ಒಂದು ಬಹಿರಂಗ ಚರ್ಚೆಯಾಗಿ ಸಾರ್ವಜನಿಕರು, ರಂಗತಜ್ಞರು ಎಲ್ಲರೂ ಚರ್ಚಿಸಿದರು. ಅವರ ಮುಂದೆ ಇದ್ದ ನೈತಿಕ ಮೌಲ್ಯ, ಅನುಕೂಲ, ಅನಾನುಕೂಲ ಮತ್ತು ರಂಗಭೂಮಿಯ ಉಳಿವಿನ ಪ್ರಶ್ನೆಗಳಲ್ಲಿ ರಂಗಭೂಮಿಯ ಉಳಿವಿಗಾಗಿ ಸ್ತ್ರೀಯರ ಪ್ರವೇಶ ಅಗತ್ಯ ಎಂಬ ತೀರ್ಮಾನಕ್ಕೆ ಬಂದರು.

'ವೇಶ್ಯೆ'ಯರ ಮನಸ್ಸು ಯಾವಾಗಲೂ ಕೆಟ್ಟ ಯೋಚನೆ ಮಾಡುವುದರಿಂದ ಅವರು ಎಂಥ ಪಾತ್ರ, ಭಾವಾಭಿನಯವನ್ನೂ ನಿರ್ವಹಿಸಬಲ್ಲರು ಎಂಬ ಶಿಫಾರಸ್ಸು ಇತ್ತು! ಕೆಲವರಿಗೆ ವೇಶ್ಯೆಯರಿಗಿಂತ ವಿಧವೆಯರಿಗೆ ಕೊಂಚ ತರಬೇತಿ ಕೊಟ್ಟು ರಂಗಪ್ರವೇಶ ಮಾಡಿಸುವುದೇ ಸರಿ ಎಂದು ತೋರಿತ್ತು. ಆ ಹೊತ್ತಿಗೆ ಜನಪ್ರಿಯ ಸ್ತ್ರೀ ವೇಷಧಾರಿ ಪುರುಷರಿಗೆಲ್ಲ ವಯಸ್ಸಾಗಿ ಹೋಗಿತ್ತು. ಹೊಸ ತಯಾರಿಗೆ ಸ್ತ್ರೀ ವೇಷ ಹೊಂದಲಿಲ್ಲ. ಆ ತಯಾರಿ ಇರಲಿಲ್ಲ. ಮುಖ್ಯವಾಗಿ ಪ್ರೇಕ್ಷಕನಿಗೆ ಅದು ಬೇಡವಾಗಿತ್ತು. ಇಂಥ ಸಂದರ್ಭದಲ್ಲಿ ರಂಗ ಸಿದ್ಧಾಂತಿಗಳು ಹೀಗೆ ವ್ಯಾಖ್ಯಾನಿಸಿದರು. "ದೇಶ ಬಹುದೊಡ್ಡ ಸಮಸ್ಯೆಯನ್ನು ಎದುರಿಸುತ್ತಿದೆ. ಯುವ ಜನಾಂಗ ಧೀರೋದಾತ್ತ–ವಾಗಬೇಕು. ರಂಗಭೂಮಿಯಲ್ಲಿ ಸ್ತ್ರೀ ವೇಷ ಧರಿಸಿ, ಅನುಕರಣ ಮಾಡಿದರೆ ಅವರ ಶೌರ್ಯವೇ ನಾಶವಾದೀತು. ಆದ್ದರಿಂದ ಸ್ತ್ರೀಯರೇ ಸ್ತ್ರೀ ಪಾತ್ರ ನಿರ್ವಹಿಸಲಿ. ಅವರೇನು ಯುದ್ಧ ಮಾಡಬೇಕೇ, ಪೌರುಷದ ಅಗತ್ಯವಿದೆಯೇ?" ಮತ್ತು "ಇವರೆಲ್ಲ 'ಕುಲೀನ' ಸ್ತ್ರೀಯರಾದ್ದರಿಂದ ಯಾವ ಪುರುಷನ ಪರಿಶುದ್ಧತೆಗೂ ಧಕ್ಕೆಯಿಲ್ಲ".

ಇದರ 'ಕುಲೀನ' ಸ್ತ್ರೀ ಪರಿಕಲ್ಪನೆಗೆ ಇನ್ನೊಂದು ದೃಷ್ಟಿಕೋನವೂ ಇತ್ತು. ಅವರು ಮೊದಲು ಭಾವಿಸಿದ ಹಾಗೆ ವೇಶ್ಯೆಯರನ್ನೂ ರಂಗದ ಮೇಲೆ ತರುವುದು ಕಷ್ಟವಾಯಿತು. ಆಕೆ ಒಂದು ರಾತ್ರೆಗೆ ಒಂದು ಸಾವಿರ ರೂಪಾಯಿಗೆ ಕಡಿಮೆ ಇಲ್ಲದಂತೆ

ದುಡಿಯಬಲ್ಲವಳಾಗಿದ್ದಳು. ರಂಗಭೂಮಿಯ ಜನರಿಗೆ ತಿಂಗಳಿಗೆ ೧೫೦ ರೂಪಾಯಿ ಕೊಡುವುದೇ ಪ್ರಯಾಸದ ಸಂಗತಿ. ಹೀಗಾದಾಗ ಮತ್ತು ಅವರು ಪರಿಭಾವಿಸಿದ ವಿದ್ಯಾವಂತ 'ಕುಲೀನ' ಸ್ತ್ರೀಯರು ಸಂಖ್ಯೆಯಲ್ಲಿ ಕಡಿಮೆ, ಎಲ್ಲರೂ ರಂಗಾಸಕ್ತರಲ್ಲ-ವಾದ್ದರಿಂದ ಅವರು ಬೇರೆ ಬೇರೆ ವರ್ಗದ ಸ್ತ್ರೀಯರನ್ನು ಒಬ್ಬನಿಗೆ ನಿಷ್ಠಳಾಗಿರುವುದರಿಂದ 'ಕುಲೀನೆ' ಎಂದುಕೊಂಡು ಸ್ವಾಗತಿಸಲು ಸಿದ್ಧರಾದರು. ಇಂಥ 'ನೀತಿವಂತ', 'ನೈತಿಕ ಮೌಲ್ಯ'ವುಳ್ಳ ಬದುಕನ್ನು ನಡೆಸುವಂತಹ ಒಂದು ಕಲಾವಿದ ಪರಂಪರೆಯನ್ನೇ ಈ ಮಧ್ಯಮ ವರ್ಗದ ಪುರುಷ ಮೌಲ್ಯಗಳು ಹುಟ್ಟು ಹಾಕಿದ್ದವು.[೧]

ಹೀಗೆ ಒತ್ತಾಯಪೂರ್ವಕವಾಗಿ ಒಂದು ಗೊತ್ತಾದ ಬದುಕಿಗೆ ತನ್ನನ್ನು ಹೊಂದಿಸಿಕೊಂಡು 'ಕುಲೀನ'ಳಾಗಿ ರಂಗತಯಾರಿ ಪಡೆದ ಸ್ತ್ರೀಯರು ಇಂದೂ ಇದ್ದಾರೆ. ಹೇಳಿಕೊಳ್ಳಲು, ಹೊರಬರಲು ಸಂಕೋಚಪಡುತ್ತಾರೆ ಎಂದು ದಾಖಲೆಗಳು ಹೇಳುತ್ತವೆ. ಆದರೆ ಇಂಥ ಆರೋಪಿತ ಪಟ್ಟ, ತರಬೇತಿಯಂಥ ನಿಯಮಗಳು ಯಾವ ಪುರುಷ ಕಲಾವಿದನಿಗೂ ಅನ್ವಯವಾಗಲಿಲ್ಲ ಎಂಬುದನ್ನು ಗಮನಿಸಬಹುದು. ೧೯೧೫ರಲ್ಲಿ ಇಂಥ ಸಂಗತಿಗಳಿಗೆ ಪ್ರತಿಕ್ರಿಯಿಸಲು ಸಂಘಟನೆಯೊಂದು ವೇದಿಕೆ ಕಲ್ಪಿಸಿತು. ಬಹುತೇಕ ಕಲಾವಿದೆಯರು ಭಾಗವಹಿಸಲು ಹಿಂಜರಿದರು. ಇಬ್ಬರು, ಮೂವರು ಮಾತ್ರ ಸ್ಪಂದಿಸಿದರು. ಅವರ ಅಭಿಪ್ರಾಯಗಳ ಸಾರಾಂಶವೆಂದರೆ ಕಲಾವಿದೆ ಕಲಾವಿದನನ್ನೇ ವಿವಾಹವಾಗಬೇಕು. ಆಗ ಸಮಸ್ಯೆಗಳು ಕಡಿಮೆ. ಹಾಗಿಲ್ಲವಾದರೆ ವಿವಾಹವೇ ಆಗದೆ ಕಲೆಯಲ್ಲಿ ತೊಡಗಿಕೊಂಡುಬಿಡಬೇಕು. ಇಂಥ ಅನೇಕ ಪ್ರಸಂಗಗಳನ್ನು ನಾವು ಕಾಣಬಹುದು. ಅದಕ್ಕಿಂತಲೂ ಮಿಗಿಲಾಗಿ ಕಲಾವಿದೆಯರ ಅಭಾವ ಇರುವಾಗ ಇನ್ನೊಂದು ಕಂಪನಿ ಹಣದ ಆಮಿಷವೊಡ್ಡಿ ಕರೆದೊಯ್ದರೇನು ಗತಿಯೆಂದು ಮಾಲೀಕರೆ ಮದುವೆಯಾಗಿ ಬಿಡುವುದನ್ನೂ ಕಾಣುತ್ತೇವೆ. ಅಲ್ಲಿ ವಯಸ್ಸಿನ ಪರಿವೆಯಿಲ್ಲ. ಆಕೆ ಆತನ ಎಷ್ಟನೆಯ ಹೆಂಡತಿ ಎಂಬುದೂ ಪರಿಗಣಿತವಾಗುವುದಿಲ್ಲ. ಆಕೆಗೂ ಒಂದು 'ಸುರಕ್ಷತೆ' ಬೇಕಾಗಿ ಅಂಥ ಬದುಕನ್ನು ಒಪ್ಪಿಕೊಳ್ಳುವ ಸಾಧ್ಯತೆಗಳೂ ಇವೆ. ಇವೆಲ್ಲ ವೈಯಕ್ತಿಕ ಬದುಕಿನ ಬಗೆಗಾದರೆ ಯಮುನಾಬಾಯಿ ಎಂಬ ಕಲಾವಿದೆ

---

೧. ಮಹಿಳಾ ಲೋಕ, ಪುಟ ಸಂಖ್ಯೆ ೧೧೯, ಸಂಪಾಕರು: ನೇಮಿಚಂದ್ರ.

ನೇರವಾಗಿ ನಾಟಕ ರಚನೆಯನ್ನು ಕುರಿತೆ ಮಾತಾಡುತ್ತಾರೆ. ಆಕೆಯ ಆಕ್ಷೇಪಣೆಗಳು ಗಂಭೀರವಾಗಿ ಪರಿಗಣಿಸಬೇಕಾದಂಥವಾಗಿವೆ.

ಒಟ್ಟಾರೆ ಸ್ತ್ರೀವಾದವೆನ್ನುವುದು ದೇಹ - ಮನಸ್ಸುಗಳಲ್ಲಿ ವ್ಯಾಪಿಸಿಕೊಂಡರೂ ಅಪಾಯ ತಪ್ಪಿದ್ದಲ್ಲ. ಗಂಡಸರನ್ನು ಶೋಷಿಸುವ ಗಂಡಸರು, ಗಂಡಸರನ್ನು ಶೋಷಿಸುವ ಹೆಂಗಸರು, ಹೆಂಗಸರನ್ನೇ ಶೋಷಿಸುವ ಹೆಂಗಸರು - ಎಲ್ಲರೂ ಈ ಲೋಕದಲ್ಲಿದ್ದಾರೆ. ಈ ವಿಚಾರದ ತಿಳಿವು ಸ್ತ್ರೀವಾದ ನೆಲೆಯನ್ನು ಗಟ್ಟಿ ಹಾಗೂ ವಿಶಾಲಗೊಳಿಸುತ್ತದೆ. ಸರ್ವತೋಮುಖರಾದ ಕವಿಗಳು ಯಾರೋ ಒಬ್ಬೊಬ್ಬರು ಕೇವಲ ಪ್ರತಿಭಾ ಶಕ್ತಿಯಿಂದ ಸ್ತ್ರೀಯರ ಆತ್ಮಪರಿಚಯವನ್ನು ಮಾಡಿಯಾರು. ಅನೇಕ ಸ್ತ್ರೀಯರು ಕಲಾಭಿಮಾನಿಗಳಾಗಿ ಪಾತ್ರವನ್ನು ವಹಿಸುವುದಕ್ಕೆ ಸಿದ್ಧರೇ ಆಗಿದ್ದರೂ, ಈ ವಿಧವಾದ ರಂಗಸ್ಥಳದ ಅಪಮಾನದಿಂದಾಗಿ ಎಲ್ಲರನ್ನೂ ಹಿಂದೆಳೆಯುತ್ತಿದೆ. ಬಾಲಗಂಧರ್ವರಂಥ ಪುರುಷರು ಸ್ತ್ರೀ ವೇಷ ಹಾಕಿದ್ದರಿಂದ ಆತನಿಗೆ ಇದು ಅಪಮಾನದ ಸಂಗತಿ ಆಗಿರಲಾರದು. ದೇವರುಗಳನ್ನೆ ರಂಗಭೂಮಿಯಲ್ಲಿ ವೈಭವಿಸಿ ತೋರಿಸಿದ ಬಗ್ಗೆ ಆಕ್ಷೇಪಿಸುತ್ತಾರೆ. ಇದೆಲ್ಲವೂ ರಂಗಭೂಮಿಯಲ್ಲಿ ಸ್ತ್ರೀಯರನ್ನು ಬಳಸಿದ ವೈಖರಿಯಾಗಿದೆ. ರಂಗಪ್ರಿಯರು, ರಂಗಭೂಮಿಯ ಹಿತೈಷಿಗಳಾದವರು ಕಾಲಕಾಲಕ್ಕೆ ಸಿದ್ಧಾಂತವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ತಿರುಚಿ ವ್ಯಾಖ್ಯಾನಿಸಿರು-ವುದನ್ನು ಗಮನಿಸಬಹುದು.

# ಉಪಸಂಹಾರ

ಒಟ್ಟಾರೆ ಮಹಿಳೆಯರ ಮೇಲೆ ನಡೆಯುವ ಕ್ರೌರ್ಯ ಎಲ್ಲ ರೀತಿಯ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ಮತ್ತು ಭೌಗೋಳಿಕ ಎಲ್ಲೆಗಳನ್ನು ಮೀರಿ ನಡೆಯುವಂತಹ ಲಿಂಗಾಧಾರಿತ ಕ್ರೌರ್ಯವಾಗಿದೆ. ಕೆಲವು ವೇದಿಕೆಗಳು ಮಹಿಳೆಯರ ಮೇಲೆ ನಡೆಯುವ ಈ ರೀತಿಯ ಕ್ರೌರ್ಯಗಳನ್ನು ವ್ಯಾಖ್ಯಾನಿಸಿದ್ದು ಹೀಗೆ: "ಮಹಿಳೆಯರಿಗೆ ದೈಹಿಕವಾಗಿ, ಲೈಂಗಿಕವಾಗಿ, ಮಾನಸಿಕವಾಗಿ ನೋವು ಕೊಡುವಂತಹ ಯಾವುದೇ ರೀತಿಯ ಲಿಂಗಾಧಾರಿತ ಕ್ರೌರ್ಯವು ಹಿಂಸೆ ಎನಿಸಿಕೊಳ್ಳುತ್ತದೆ. ಖಾಸಗಿ ಮತ್ತು ಸಾರ್ವಜನಿಕ ಜೀವನದಲ್ಲಿ ಉಂಟಾಗಬಹುದಾದ ಹಿಂಸೆಯು ಬೆದರಿಕೆಯ ಸ್ವರೂಪದಲ್ಲಿರಬಹುದು, ಇಲ್ಲವೇ ಬಲವಂತಪಡಿಸುವಂತಹುದಾಗಿರಬಹುದು ಹಾಗೂ ಸ್ವಾತಂತ್ರ್ಯಹರಣದಲ್ಲಿ ಕೊನೆಗೊಳ್ಳಬಹುದು" ಹಿಂಸೆಯೆನ್ನುವುದನ್ನು ಹೀಗೆ ವ್ಯಾಖ್ಯಾನಿಸಿತು ಕ್ರಿಯಾವೇದಿಕೆ.

ಸಮಾಜದಲ್ಲಿನ ಮಹಿಳೆಯರ ಸ್ಥಿತಿ ಸುಧಾರಿಸಬೇಕಾದರೆ ಸುಸಂಗತ ಮಹಿಳಾ ವಿಮೋಚನಾ ಚಳವಳಿ ಬೆಳೆಯಬೇಕಾಗಿದೆ. ಅಂಥ ಚಳವಳಿ ನಮ್ಮ ಸಮಾಜದಲ್ಲಿ ಕ್ರಿಯಾಶೀಲವಾಗಿರುವ ಎಲ್ಲ ಪಾರಂಪರಿಕ ಹಾಗೂ ಧಾರ್ಮಿಕ ಪ್ರತಿಬಂಧಕಗಳಿಗೂ ಅರ್ಥಪೂರ್ಣ ಸವಾಲು ಹಾಕಬೇಕಾಗಿದೆ. ಜೊತೆಗೆ ಮಹಿಳೆಯರು ಕಾನೂನಿನಲ್ಲಿ ದೂರವ್ಯಾಪೀ ಬದಲಾವಣೆಗಳನ್ನು ತರಬಲ್ಲಂಥ ರಾಜಕೀಯ ಪ್ರಭಾವವಿರುವ ಬಲಿಷ್ಠ ಸಂಘಟನೆಗಳನ್ನು ನಿರ್ಮಿಸಿಕೊಳ್ಳಬೇಕಾಗಿದೆ. ಹಾಗಾದರಷ್ಟೇ ಸಮಾಜದಲ್ಲಿನ ಮಹಿಳೆಯರ ಸ್ಥಾನಮಾನ ಈಗಿರುವ ದ್ವಿತೀಯ ದರ್ಜೆಯ ಸ್ಥಿತಿಯಿಂದ ಪುರುಷರೊಂದಿಗೆ ಸಮಾನತೆಯ ಸ್ಥಿತಿಗೆ ಏರಬಲ್ಲುದು.

ವಾಸ್ತವದಲ್ಲಿ, ಒಟ್ಟು ಸಾಂಸ್ಕೃತಿಕ ಪರಿಸರ ಬದಲಾವಣೆ ಹೊಂದದೇ ಅಭಿವೃದ್ಧಿ ಆಗದು. ಇಂದು ಮಹಿಳೆಯರ ಪ್ರತಿನಿಧೀಕರಣದಿಂದ ಅನೇಕ ಬದಲಾವಣೆಗಳಾಗಿವೆ. ನಿಧಾನಗತಿಯೇ ಆದರೂ ತಳಮಟ್ಟದ ಅಧಿಕಾರ ವಿತರಣೆಯಲ್ಲಿ ಇಂದು ಪ್ರಮುಖ ಪರಿವರ್ತನೆಗಳಾಗಿವೆ. ಇದರ ಜೊತೆಗೆ ಮಹಿಳೆಯರನ್ನು ಸಶಕ್ತೀಕರಣಗೊಳಿಸುವ ಪ್ರಕ್ರಿಯೆ ಬೇಗ ಆಗಬೇಕಾಗಿದೆ. ಸದ್ಯಕ್ಕೆ ಸ್ತ್ರೀ ಪುರುಷ ಸಮಾನತೆಯ ಒಂದು ಸಾಧನವಾಗಿ ಒದಗಬಹುದಾದ ಮಹಿಳಾ ಮೀಸಲಾತಿಯನ್ನು ಪಡೆದು ನಾವು ರಾಜಕೀಯವಾಗಿ ಸಶಕ್ತರಾಗಬೇಕು. ಇಲ್ಲಿ ಮಹಿಳೆಯರೆಲ್ಲರೂ ಒಂದೇ. ನಂತರದಲ್ಲಿ ಈ ಸೌಲಭ್ಯ ನಮ್ಮ ನಮ್ಮಲ್ಲಿ ಹೇಗೆ ಹಂಚಿಕೆಯಾಗಬೇಕೆಂಬ ಸಾಮಾಜಿಕ ನ್ಯಾಯದ

ಬಗ್ಗೆಯೂ ವಿವೇಚಿಸಲೇಬೇಕು. ಕಲೆಯನ್ನು ಕಲೆಯಾಗಿ, ಬದುಕಿನ ಪ್ರತಿಬಿಂಬವನ್ನು ಚಲನಚಿತ್ರದ ರೂಪದಲ್ಲಿ ನೋಡುವುದೂ ಕೂಡಾ ಮಹಾಪಾಪವೆಂದು ಬೋಧಿಸುವುದು ಮತ್ತು ಈ ಬೋಧನೆಯನ್ನೇ ಜನರು ವೇದವಾಕ್ಯವೆಂದು ನಂಬುವುದು ಸಾಂಸ್ಕೃತಿಕ ಅನನ್ಯತೆಯ ಮೇಲಾಗುವ ಪ್ರಹಾರವೆನ್ನಬಹುದು.

ಸಮಾಜದೊಡನೆ ಪ್ರಶ್ನೆ ಕೇಳುವುದರ ಮೂಲಕ ಸಮಾಜವನ್ನು ಬಡಿದೆಬ್ಬಿಸಬಹುದು. ಸಾಹಿತ್ಯದ ಮೂಲಕ ಸಾಮಾಜಿಕ ಬದಲಾವಣೆಗೆ ಪ್ರಯತ್ನಿಸಬಹುದು. ಆದರೆ ಬದುಕಿನಲ್ಲಿ ಇಂದಿಗೂ ಮಹಿಳೆ ದ್ವಿತೀಯ ದರ್ಜೆಯ ಪ್ರಜೆಯಾಗಿಯೇ ಕಾಣಲ್ಪಡುತ್ತಾಳೆ. ಗಂಡನಂತೆಯೇ ಅಧಿಕಾರಿಯಾಗಿರುವ, ಆತನಷ್ಟೆ ಅಥವಾ ಕೆಲವೊಮ್ಮೆ ಆತನಿಗಿಂತಲೂ ಅಧಿಕ ಸಂಬಳ ತರುವ ಹೆಂಡತಿಗೂ ಆರ್ಥಿಕ ಸ್ವಾತಂತ್ರ್ಯವಿಲ್ಲ. ಮನೆಯಲ್ಲಿ ಆ ಗಂಡನ ಊಟವಾದ ಬಳಿಕವಷ್ಟೇ ಆ ಹೆಂಡತಿ ಊಟ ಮಾಡಬೇಕು ಎಂಬ ಕಟ್ಟುನಿಟ್ಟಾದ ಪದ್ಧತಿ ಇಂದಿಗೂ ಚಾಲ್ತಿಯಲ್ಲಿದೆ.

ಯಾವುದೇ ಸಮಾಜದಲ್ಲಿ ಮಹಿಳೆಗೆ ಸಹಜವಾಗಿ ಬದುಕುವ ಹಕ್ಕಿದೆ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಮತ್ತು ರಾಜಕೀಯವಾಗಿ ವ್ಯವಸ್ಥೆ ಮಹಿಳೆಯನ್ನು ನಿಯಂತ್ರಿಸುವಾಗ ಮಹಿಳೆಯ ಬದುಕುವ ಹಕ್ಕಿಗೆ ಭಂಗ ಬರಬಾರದು. ಅಲ್ಲದೆ ವ್ಯವಸ್ಥೆಯ ನಿರ್ದೇಶನಗಳು ಮಹಿಳೆಯರನ್ನೇ ವಿಭಾಗ ಮಾಡುವಂತಿರಬಾರದು. ಲಿಂಗಾಧಾರಿತವಾಗಿ, ಜಾತಿ ಆಧಾರಿತವಾಗಿ ಅಥವಾ ಧರ್ಮಾಧಾರಿತವಾಗಿ ವಿಭಿನ್ನತೆಯನ್ನು ಸೃಷ್ಟಿಸುವುದು ಮಹಿಳಾಪರ ಆಲೋಚನೆಯಲ್ಲ. ಆದ್ದರಿಂದ ಮಹಿಳೆ ಇನ್ನಾದರೂ ತನ್ನ ಮೇಲೆ ಹೇರಿರುವ ಕೃತಕ ಸಂಪ್ರದಾಯಗಳನ್ನು ವಿಚಾರದ ಕಲೆಯಲ್ಲಿ ಗ್ರಹಿಸಿ ಆಚಾರದ ನೆಲೆಯಿಂದ ಬಿಡಿಸಿಕೊಳ್ಳಬೇಕಾಗಿದೆ. ಮಹಿಳೆಯರನ್ನು ಸಮಾಜದ ಮುಖ್ಯವಾಹಿನಿಯಿಂದ ಬದಿಗಿಟ್ಟು ಸಂಸ್ಕೃತಿ ಕಟ್ಟಲಾಯಿತು. ಆದ್ದರಿಂದಲೇ ಇಡೀ ಮಾನವ ಸಂಸ್ಕೃತಿಗೆ ಪರಿಪೂರ್ಣತೆ ಪ್ರಾಪ್ತವಾಗದೆ ಸಾಮಾಜಿಕ ಅಸಮತೋಲನ ಉಂಟಾಯಿತು. ಇತಿಹಾಸದಲ್ಲಿ ಆಗಿರುವ ಇಂಥ ಲೋಪದೋಷಗಳನ್ನು ಇನ್ನಾದರೂ ಸರಿಪಡಿಸಿಕೊಳ್ಳಬೇಕಾದ ಅಗತ್ಯವಿದೆ.

ಬದಲಾವಣೆ ಎಂಬುದು ಸಮಾಜದ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಅವಲಂಬಿಸಿಯೇ ಹುಟ್ಟುವಂತದ್ದು. ಒಂದೇ ವ್ಯವಸ್ಥೆಯಲ್ಲಿ ಪುರುಷರಿಗೆ ವಿಶೇಷ ಸವಲತ್ತುಗಳು ಸಿಗುತ್ತಾ ಮಹಿಳೆಯರು ಅವಮಾನಗಳನ್ನು ಅನುಭವಿಸುತ್ತಿದ್ದರೆ ಅದು ಸಾಮಾಜಿಕ ನ್ಯಾಯವಾಗಲಾರದು. ಸ್ತ್ರೀ ಬದುಕಿನ ಕೌಟುಂಬಿಕ ಪರಿಸರದಲ್ಲಿ

ನಡೆಯುವ ವಿಚಿತ್ರ ಹಿಂಸೆ - ನೀಚಕೃತ್ಯಗಳನ್ನು ಪ್ರಧಾನಧಾರೆಗೆ ತರದೆ ಒಟ್ಟಾರೆಯಾಗಿ ಸ್ತ್ರೀ-ಪುರುಷರಿಬ್ಬರ ಹಿತಾಸಕ್ತಿ ಮತ್ತು ರಾಷ್ಟ್ರೀಯವಾದದ ನೆಲೆಯಲ್ಲಿ ಸಮೂಹದ ಹಿತಾಸಕ್ತಿಯನ್ನು ಪ್ರಧಾನವಾಗಿಟ್ಟುಕೊಂಡು ವೈಯಕ್ತಿಕ ವಲಯದ ಸಾಂಸ್ಕೃತಿಕವಾದ ಪರಿಕಲ್ಪನೆಯನ್ನು ಪ್ರಜ್ಞಾಪೂರ್ವಕವಾಗಿಯೇ ನಯಗೊಳಿಸಿಕೊಳ್ಳಬೇಕು. ಮಹಿಳೆಯರ ಸಮಸ್ಯೆ ಜಾಗತಿಕವಾದದ್ದು. ಹೆಣ್ಣೆಂಬ ಕಾರಣಕ್ಕೆ ಹುಟ್ಟಿಕೊಳ್ಳುವ ಅನ್ಯಾಯ - ಅನಾಚಾರಗಳು ಕೊನೆಗಾಣದ ಹೊರತು ಸಮಾಜ ಶುದ್ಧವಾಗುವುದಿಲ್ಲ. ಒಬ್ಬ ಸಮಾಜವಾದಿಯಾದವನಿಗೆ ಮಹಿಳೆ ಹೇಗೆಲ್ಲಾ ಕಾಣುತ್ತಾಳೆಂಬುದು ಕೆಲವರ ಲೇಖನಗಳಿಂದ ಗೊತ್ತಾಗುತ್ತದೆ.

# ಪರಾಮರ್ಶನ ಗ್ರಂಥಗಳು


೧. ಮಹಿಳಾ ಚಳವಳಿ – ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ : ಲೇಖಕರು: ಡಾ. ಹಾಲತಿ ಸೋಮಶೇಖರ್ ವಿಸ್ಮಯ ಪ್ರಕಾಶನ, 'ಮೌನ', ಎಲ್. ೭, ೧ನೆಯ ತಿರುವು, ೧ನೆಯ ಹಂತ, ಕುವೆಂಪುನಗರ, ಮೈಸೂರು–೫೭೦ ೦೨೩.

೨. ಕವಲು : ಲೇಖಕರು : ಎಸ್.ಎಲ್.ಭೈರಪ್ಪ ಸಾಹಿತ್ಯ ಭಂಡಾರದ ಪ್ರಕಾಶನ, ಜಂಗಮಮೇಸ್ತ್ರೀ ಗಲ್ಲಿ, ಬಳೇಪೇಟೆ, ಬೆಂಗಳೂರು – ೫೬೦ ೦೫೩.

೩. ಮಹಿಳಾ ಲೋಕ : ಸಂಪಾದಕರು: ನೇಮಿಚಂದ್ರ ನವಕರ್ನಾಟಕ ಪ್ರಕಾಶನ, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು –೫೬೦ ೦೦೧.

೪. ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ : ಲೇಖಕರು : ಸಾರಾ ಅಬೂಬುಕರ್ ಪ್ರಕಾಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩೨೭೬.

೫. ಸಾಹಿತ್ಯ ಸಂವಾದ : ಸಾಪ್ತಾಹಿಕ ಪುರವಣಿ ಪತ್ರಿಕೆ, ಪ್ರಜಾವಾಣಿ, ಭಾನುವಾರ ೧೩ನೇ ಡಿಸೆಂಬರ್ ೨೦೦೦.

೬. ಪಾತಾಳಕ್ಕಿಳಿದ ಸೃಜನಶೀಲತೆ : ಸಾಪ್ತಾಹಿಕ ಪುರವಣಿ ಪತ್ರಿಕೆ, ಪ್ರಜಾವಾಣಿ, ಭಾನುವಾರ ೨೫ನೇ ಜುಲೈ ೨೦೧೦.

೭. ಕೌಟುಂಬಿಕ ಕಟುಸತ್ಯದ ಕಾದಂಬರಿ : ಕನ್ನಡ ಪ್ರಭ ದಿನಪತ್ರಿಕೆ ಭಾನುವಾರ ೧೩ನೇ ಜುಲೈ ೨೦೧೦.

